

# ಚಂದಮಾಮ

ನವಂಬರ್ 1986



## ಈ ಸಂಚಿಕೆಯಲ್ಲಿ






ಬಿಡಿ ಪ್ರತಿ ರೂ. ೨-೫೦

ವಾರ್ಷಿಕ ಚಂದಾ ರೂ. ೩೦.೦೦

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ

---

ಲೋಕ ವ್ಯವಹಾರ ಜ್ಞಾನ, ತಿಳುವಳಿಕೆಯಿಂದ ಬಿಡಿಸಿ ನೋಡುವ ಬುದ್ಧಿ, ಯಾವ ಹೊತ್ತಿಗೆ ಎಷ್ಟು ಬೇಕೋ ಅಷ್ಟೇ ಮಾತಾಡುವ ಸಮಯಜ್ಞತೆ ಇವಿಷ್ಟು ಇಲ್ಲದ ಮನುಷ್ಯನು ಧನಾರ್ಜನೆಯನ್ನೇ ಗುರಿಯಾಗಿಟ್ಟುಕೊಂಡು ಕಾರ್ಯ ಪ್ರವೃತ್ತನಾದರೆ ಧನವೂ ಸೇರದು ; ನಷ್ಟಕ್ಕೂ ಒಳಗಾಗುತ್ತಾನೆ. ಅದರ ಮೇಲೆ ಲೋಭತ್ವವೂ ಸೇರಿಕೊಂಡಿದ್ದರೆ ಹತ್ತು ಜನರ ಮುಂದೆ ನಗೆಗೇಡಾಗುತ್ತಾನೆ. ಇದನ್ನು ಎತ್ತಿ ತೋರಿಸುತ್ತದೆ ಈ ಸಂಚಿಕೆಯಲ್ಲಿರುವ "ಗೋಪಣ್ಣನ ಗೋದಾನ" ಎಂಬ ಸಣ್ಣ ಕಥೆ.

## ಅಮರವಾಣಿ

ತಾವದ್ ಭಯಸ್ಯ ಭೇತವ್ಯಂ ಯಾವದ್ ಭಯಮನಾಗತಮ್<br>ಆಗತಂ ಚ ಭಯಂ ವೀಕ್ಷ್ಯಂ ನರಃ ಕುರ್ಯಾದ್ ಯಥೋಚಿತಮ್

ಅಪಾಯವು ಮೇಲೆ ಬೀಳುವವರೆಗೆ ಅದನ್ನು ಕುರಿತು ಭಯಪಡಬಹುದು. ತೀರಾ ಅದು ಬಂದ ಮೇಲೆ ಹೆದರಿದೆ ಅದರಿಂದ ಪಾರಾಗಲು ಧೈರ್ಯದಿಂದ ಪ್ರಯತ್ನಿಸಬೇಕು.

---

ಸಂಪುಟ : ೭೭ ನವೆಂಬರ್ '೮೭ ಸಂಚಿಕೆ : ೫

ಬಿಡಿ ಪ್ರತಿ ರೂ. ೨-೫೦ : : ವಾರ್ಷಿಕ ಚಂದಾ ರೂ. ೩೦-೦೦






## ಚಂದಮಾಮನ ಹರಟೆ

### ಜಟಿಲವಾಗುತ್ತಿರುವ ಜನಸಂಖ್ಯಾ ಸಮಸ್ಯೆ !



ಈ ಶತಮಾನಕ್ಕೆ ನಮ್ಮ ಬೊಂಬಾಯಿ, ಕಲಕತ್ತ, ಢಿಲ್ಲೀ ನಗರಗಳು, ಪ್ರಪಂಚದಲ್ಲೇ ಅಧಿಕ ಜನಸಂಖ್ಯೆಯುಳ್ಳ ಹತ್ತು ನಗರಗಳ ಪಟ್ಟಿಯಲ್ಲಿ ಸೇರಿಕೊಳ್ಳುತ್ತವೆ. ಈ ದಿನಗಳ ಪ್ರಪಂಚದ ನಗರಗಳಲ್ಲಿ ಅಧಿಕ ಜನಸಂಖ್ಯೆ ಇರುವ ಮೆಕ್ಸಿಕೋ ನಗರದಲ್ಲಿ ೧೮ ಮಿಲಿಯ ಪ್ರಜೆಗಳು ವಾಸಿಸುತ್ತಾರೆ. ೨೦೦೦ ದ ಇಸವಿಯಲ್ಲಿ ಆ ನಗರದ ಜನಸಂಖ್ಯೆ ೨೬.೩ ಮಿಲಿಯದವರೆಗೆ ತಲಪುತ್ತದೆ. ೨೪ ಮಿಲಿಯ ಜನಸಂಖ್ಯೆಯೊಂದಿಗೆ ಸಾವೋಪೋಲೋ ಎರಡನೇ ಸ್ಥಾನವನ್ನು, ೧೭.೧ ಮಿಲಿಯ ಜನಸಂಖ್ಯೆಯೊಂದಿಗೆ ಜಪಾನಿನ ಟೋಕ್ಯೊ. ಯೋಕೋಹೋಮಾ ಪ್ರಾಂತವು ಮೂರನೇ ಸ್ಥಾನವನ್ನು ಮುಟ್ಟಬಲ್ಲದೆಂದು ಐಕ್ಯರಾಜ್ಯ ಸಮಿತಿ ಹೊರಡಿಸಿದ ಒಂದು ನಿವೇದಿಕೆ ತಿಳಿಯಪಡಿಸುತ್ತದೆ.

### ವಿಕಲಾಂಗನ ಪರ್ವತಾರೋಹಣೆ !

ಯೊಷಿಯೋಪ್ಪುರೂಚೀ ಎಂಬ ೪೨ ವರ್ಷ. ಪ್ರಾಯದ ವ್ಯಕ್ತಿ ಒಂದು ಅಪಘಾತದಲ್ಲಿ ಸಿಕ್ಕಿದುದರಿಂದ ಕಾಲುಗಳು ಜಖಂಗೊಂಡವು. ಪರ್ವತಾರೋಹಣವೆಂದರೆ ಅವನಿಗೆ ಬಹಳ ಉತ್ಸಾಹ. ಕೆಲವರು ಮಿತ್ರರೊಂದಿಗೆ ಷೆರ್ಪಾಗಳ ಸಹಾಯದಿಂದ ಕೈಗಳಿಗೆ ಮಂಜಿನ ಕವಚ ಹಾಕಿಕೊಂಡು ಅವನು ಹಿಮಾಲಯ ಪರ್ವತವನ್ನು ಆರೋಹಿಸಿದನು. ವಿಕಲಾಂಗನಾದರೂ ಅವನು ಅದಕ್ಕೆ ಮೊದಲೇ ಜಪಾನಿನ ಫ್ಯೂಜೀ ಶಿಖರವನ್ನು ಕೂಡಾ ಹಟಹಿಡಿದು ಅಧಿರೋಹಿಸಿದ್ದನು.





### ದೊಡ್ಡ ಮೀಸೆ !

ಕಾಲಿಫೋರ್ನಿಯಾದ ನ್ಯೂಹಾಲ್‌ಗೆ ಸೇರಿದ ಜಿಮ್ ಮಿಚೇಲ್ ಎಂಬ ದೊಡ್ಡ ಮನುಷ್ಯನು ಪ್ರಪಂಚದೊಳಗೆಲ್ಲಾ ದೊಡ್ಡ ಮೀಸೆಯನ್ನಿರಿಸಿಕೊಂಡಿದ್ದಾನೆ. ೧೭ ಸೆಂ. ಮೀ. ಉದ್ದಕ್ಕೆ ಒಳ್ಳೇ ದರ್ಪದಿಂದ ಕಾಣಿಸುವ ಈ ಮೀಸೆ ಬೆಳೆಸಲಿಕ್ಕೆ ಐದು ವರ್ಷಗಳ ವರೆಗೆ ಬಹಳ ಶ್ರದ್ಧಾಸಕ್ತಿಗಳಿಂದ ಕೆಲಸ ಮಾಡಿದ್ದಾನೆ ಜಿಮ್‌ಮಿಚೇಲ್.

**ಪುರಾಣ ಗಾಥಾವಳಿ :**

# ಊರ್ವಶಿ

ಒಂದಾನೊಂದು ಕಾಲದಲ್ಲಿ ನರನಾರಾಯಣರು ತಪಸ್ಸು ಮಾಡಿಕೊಂಡಿರುವಾಗ, ಅವರ ತಪಸ್ಸನ್ನು ಭಂಗ ಪಡಿಸಲು ದೇವೇಂದ್ರನು ಅಪ್ಸರಸಿಯರನ್ನು ಕಳುಹಿಸಿದನು. ಅದನ್ನು ತಿಳಿದ ನಾರಾಯಣನು, ಉಗುರಿನಿಂದ ತನ್ನ ತೊಡೆಯನ್ನು ಗೀರಿ, ಅಪ್ಸರಸಿಯರನ್ನು ಮೀರಿಸುವ ಅಂದಚೆಂದಗಳ ಒಬ್ಬಳು ಯುವತಿಯನ್ನು ಹುಟ್ಟಿಸಿದನು. ಅವಳ ಅಪೂರ್ವ ಸೌಂದರ್ಯವನ್ನು ನೋಡಿ ಅಪ್ಸರಸಿಯರು ನಾಚಿ ಹಿಂದಿರುಗಹೋದರು. ಊರು (ತೊಡೆ) ವಿನಿಂದ ಹುಟ್ಟಿದ ಅವಳಿಗೆ 'ಊರ್ವಶಿ' ಎಂದೇ ಹೆಸರಾಯಿತು. ಆಮೇಲೆ ಅವಳು ಕೂಡಾ ದೇವೇಂದ್ರನ ಒಡ್ಡೋಲಗದಲ್ಲಿ ನೃತ್ಯಗಾತಿಯರಲ್ಲಿ ಒಬ್ಬಳಾಗಿ ಸೇರಿದಳು.

ಒಂದು ದಿನ ಭೂಲೋಕದಿಂದ ಪುರೂರವ ಚಕ್ರವರ್ತಿ ದೇವಸಭೆಯಲ್ಲಿ ಊರ್ವಶಿಯ ನಾಟ್ಯವನ್ನು ನೋಡಿ, ಮುಗ್ಧನಾಗಿ ಅವಳನ್ನು ಮದುವೆಯಾಗಲು ಬಯಸಿದನು. ಊರ್ವಶಿಯೂ ಪುರೂರವನನ್ನು ವರಿಸಿದಳು. ಅದಕ್ಕೆ ದೇವೇಂದ್ರನ ಅಂಗೀಕಾರವೂ ಸಿಕ್ಕಿತು. ಅವರಿಬ್ಬರೂ ಮದುವೆ ಮಾಡಿಕೊಂಡು ಭೂಲೋಕವನ್ನು ಸೇರಿ ಸುಖವಾಗಿ ಕಾಲ ಕಳೆಯುತ್ತಿದ್ದರು.

ನಾಲ್ಕು ವರ್ಷಗಳು ಕಳೆದಾಗ ದೇವತೆಗಳಿಗೆ ಊರ್ವಶಿ ಇಲ್ಲದುದು ಕೊರತೆಯಾಗಿ ಕಂಡಿತು. ಅವಳನ್ನು ಹೇಗಾದರೂ ದೇವಲೋಕಕ್ಕೆ ಕರೆಯಿಸಬೇಕೆಂದು ನಿಶ್ಚಯಿಸಿಕೊಂಡರು. ಕೆಲವು ಗಂಧರ್ವರು ಭೂಲೋಕಕ್ಕೆ ಬಂದು, ಬಿರುಗಾಳಿ ಬೀಸಿದ ಒಂದು ರಾತ್ರಿಯಲ್ಲಿ ಊರ್ವಶಿಯ ಶಯನಮಂದಿರದಲ್ಲಿದ್ದ ಜಿಂಕೆಯ ಕರುಗಳನ್ನು ಕದ್ದೊಯ್ದರು. ಆ ಕರುಗಳನ್ನು ಹುಡುಕುತ್ತಾ ಊರ್ವಶಿ ಆಕಾಶಮಾರ್ಗದಲ್ಲಿ ಗಂಧರ್ವರ ಹಿಂದೆಯೇ ಹೋಗತೊಡಗಿದಳು. ಹಾಗೆಯೇ ಗಂಧರ್ವರು ಅವಳನ್ನು ದೇವಲೋಕಕ್ಕೆ ಒಯ್ದುಬಿಟ್ಟರು.

ಊರ್ವಶಿಯನ್ನು ಕಾಣದ ಪುರೂರವನಿಗೆ ಮತಿಯೇ ಚಲಿಸಿಹೋಯಿತು. ಅವನು ಅವಳನ್ನು ಎಲ್ಲೆಲ್ಲೋ ಹುಡುಕಿ ಬೇಸತ್ತು, ಕೊನೆಗೆ ದೇವತೆಗಳ ಅನುಗ್ರಹದಿಂದಾಗಿ, ಊರ್ವಶಿಯನ್ನು ಕೂಡಿಕೊಂಡು ಚೆನ್ನಾಗಿ ಜೀವಿಸಿದನು.





# ಗೋಪಣ್ಣನ ಗೋದಾನ

ನಾಗನ ಹಾಡಿಯ ಧನಿಕನಾದ ಗೋಪಣ್ಣನಿಗೆ ಹಣದ ಮೇಲೆ ಪ್ರೀತಿ ಜಾಸ್ತಿಯಾಗಿತ್ತು. ಅವನಿಗೆ ಸಾಧಾರಣವಾಗಿ ನೆಗಡಿ ಶೀತಗಳ ಹೊರತು ಬೇರೆ ರೋಗಗಳೇನೂ ಬಂದಿರಲಿಲ್ಲ. ಅಂಥವನಿಗೆ ಈ ಸಾರಿ ಬಂದ ಯಾವುದೋ ಹೊಟ್ಟೇನೋವಿನ ರೋಗವು ಯಾವ ಮದ್ದಿಗೂ ಬಗ್ಗದೆ ಗಟ್ಟಿಯಾಗಿ ಹಿಡಿದಿತ್ತು. ದೊಡ್ಡ ಚಿಂತೆ ಹಿಡಿಯಿತು ಅವನಿಗೆ.

ಗೋಪಣ್ಣನ ತಾಯಿ ಕಾವೇರಮ್ಮ ಅವನೊಂದಿಗೆ, "ಈಗ ಸತ್ತು ಸ್ವರ್ಗದಲ್ಲಿರುವ ನಿನ್ನ ಅಪ್ಪನಿಗೆ ಇಂತಹ ರೋಗವೇ ಒಂದುಸಾರಿ ಬಂದಿತ್ತು. ಏನೇನೋ ಮದ್ದು ಮಾಡಿದರೂ ಕಡಿಮೆಯಾಗಲಿಲ್ಲ. ಕಡೆಗೆ ಸದ್ಬ್ರಾಹ್ಮಣನೊಬ್ಬನಿಗೆ ಗೋದಾನ ಮಾಡಿದರು. ಕೂಡಲೇ ಆ ರೋಗ ಹೇಳ ಹೆಸರಿಲ್ಲದೆ ಹೋಗಿಬಿಟ್ಟಿತು" ಎಂದಳು.

"ನನಗೆ ಬಂದ ರೋಗಕ್ಕೂ ಗೋದಾನಕ್ಕೂ ಸಂಬಂಧವೇನಿದೆಯಮ್ಮಾ? ಅದು ಹೇಗೆ ಮದ್ದಾಗುತ್ತದೆ?" ಎಂದನು ಗೋಪಣ್ಣ.

ಅಂತಹ ರೋಗದಲ್ಲಿ ಕೂಡ ಒಂದು ದನವನ್ನು ನಷ್ಟಮಾಡಿಕೊಳ್ಳಲು ಕಷ್ಟವೆನಿಸಿತು ಗೋಪಣ್ಣನಿಗೆ. ತಾಯಿಯ ಮಾತು ಕೇಳಿ ಅವನಿಗೆ ದಿಗಿಲಾಯಿತು. ತಾಯಿ ಮತ್ತೂ ಹೇಳಿದಳು:

"ಎಲೋ ಗೋಪೂ, ನಾವು ಮಾಡಿದ ಪಾಪಗಳೇ ರೋಗಗಳಾಗಿ ನಮ್ಮನ್ನು ಹಿಡಿದು ಬಾಧಿಸುತ್ತವೆ. ಅಂದರೆ ರೋಗಗಳು ನಮ್ಮನ್ನು ಪುಣ್ಯ ಕಾರ್ಯ ಮಾಡಲು ಎಚ್ಚರಿಕೆ ಕೊಡಲಿಕ್ಕೇ ಬರುತ್ತವೆಂದು ಅರ್ಥ, ನಿನ್ನ ಸಂಗತಿ ನನಗೆ ಗೊತ್ತಿಲ್ಲದ್ದೇನಿದೆ? ಹಣ ಕೂಡಿಸಿಡುವುದರ ಹೊರತು ಯಾರಿಗೂ ಸಹಾಯಮಾಡಿ ತಿಳಿಯದವನು ನೀನು. ಎಲ್ಲಾ ನಿನ್ನಪ್ಪನ ಹಾಗೆಯೇ? ಕಡೆಗೆ ನನ್ನ ಒತ್ತಾಯದಿಂದಲೇ ಗೋದಾನಮಾಡಿ ಬಚಾವಾದರು" ಎಂದಳು ಕಾವೇರಮ್ಮ.

ಗೋಪಣ್ಣನ ಹೆಂಡತಿ ಮಕ್ಕಳು ಕೂಡಾ ಅವನಿಗೆ ತಾಯಿ ಹೇಳಿದ ಹಾಗೆ ಮಾಡಬೇಕೆಂದು ಬಲವಂತಪಡಿಸತೊಡಗಿದರು.

ಕಡೆಗೆ ಗೋಪಣ್ಣ ರಾಮಶರ್ಮನೆಂಬ ಬ್ರಾಹ್ಮಣನನ್ನು ಕರೆಯಿಸಿ, ಅವನಿಗೆ ಒಂದು ಗಬ್ಬದ ದನವನ್ನು ದಾನಮಾಡಿ, "ಅಯ್ಯಾ, ಬ್ರಾಹ್ಮಣೋತ್ತಮಾ! ದನ ಈನಿದ ಕೂಡಲೇ ದನವನ್ನು ನೀವು ಇಟ್ಟು

"ವಸುಂಧರ"



ಕೊಂಡು ಕರುವನ್ನು ನನಗೆ ಕೊಡಬೇಕು. ಕರುವನ್ನು ನಿಮಗೆ ದಾನ ಮಾಡಲಿಲ್ಲ, ದನವನ್ನು ಮಾತ್ರವೇ ದಾನ ಮಾಡಿದ್ದು. ನೆನಪಿಟ್ಟುಕೊಳ್ಳಿ!" ಎಂದನು.

ರಾಮಶರ್ಮ ಗಾಬರಿಬಿದ್ದು, "ಅಯ್ಯಾ, ತಾಯಿಯನ್ನೂ ಮಗುವನ್ನೂ ಬೇರೆ ಬೇರೆ ಮಾಡುವುದು ಮಹಾ ಪಾಪವಲ್ಲವೆ? ಅದರಿಂದ ಒಳ್ಳೆಯ ಫಲ ಬರಲಾರದೆಂದು ನನಗೆ ತೋರುತ್ತದೆ" ಎಂದನು.

"ಗೋವಿನ ನ್ಯಾಯ ಬೇರೆ, ಮಾನವರ ನ್ಯಾಯ ಬೇರೆ. ನೀವು ಹೇಳುವ ನ್ಯಾಯವು ಮಾನವರಿಗಾಯಿತು. ಮೂಕ ಪ್ರಾಣಿಗಳಿಗೆ ವರ್ತಿಸುವಂತಹುದಲ್ಲ. ಕರುವನ್ನು ನೀವು ಕೂಡಲೇ ನನಗೆ ಕೊಡಬೇಕಾಗಿಲ್ಲ. ಅವಕ್ಕೆ ತಾಯಿಯ ಅಗತ್ಯ ಮುಗಿದ ಕೂಡಲೇ ಕೊಟ್ಟುಬಿಡಿ. ಆಗ ದಾನದ ಪುಣ್ಯ ಹಾಗೇ ಇರುತ್ತೆ" ಎಂದನು ಗೋಪಣ್ಣ.

ರಾಮಶರ್ಮನು ಸರಿಯೆಂದು ಒಪ್ಪಿ, ದನವನ್ನು ತೆಗೆದುಕೊಂಡು ಹೋದನು. ಮರುದಿನವೇ ಗೋಪಣ್ಣನ ಹೊಟ್ಟೆನೋವಿನ ರೋಗ ಕೈಯಿಂದ ಒರೆಸಿ ತೆಗೆದು ಬಿಸುಟ ಹಾಗೆ ಮಾಯವಾಗಿ ಹೋಯಿತು. ಕೆಲವೇ ದಿನಗಳಲ್ಲಿ ಗೋಪಣ್ಣ ಎಂದಿನಂತೆ ಆರೋಗ್ಯವಂತನಾದನು. ತಾಯಿಗೂ ಹೆಂಡತಿಗೂ ಮಕ್ಕಳಿಗೂ ಸಂತೋಷವಾಯಿತು.

ಮತ್ತೆ ಕೆಲವು ದಿನಗಳ ಮೇಲೆ ಗೋಪಣ್ಣನು ದಾನ ಮಾಡಿದ ದನವು ಕರುಹಾಕಿತು. ಹುಟ್ಟಿದ್ದು ಹೋರೀ ಕರುವಾಗಿತ್ತು. ಈ ಸಂಗತಿ ತಿಳಿದಂದಿನಿಂದಲೂ ಗೋಪಣ್ಣನ ಮನಸ್ಸು ಚಂಚಲವಾಗಿ ತಿರುಗತೊಡಗಿತು. ಆ ದನವು ತನ್ನದಲ್ಲದೆ ಹೋದರೂ, ಆ ಕರು ತನ್ನದೇ ಆದುದರಿಂದ ಅದನ್ನು ನೋಡುವ ನೆಪಮಾಡಿ, ದಿನಕ್ಕೆ ಒಂದುಸಾರಿಯಾದರೂ ಅವನು ರಾಮಶರ್ಮನ ಮನೆಗೆ ಹೋಗಿ ದನವನ್ನೂ ಕರುವನ್ನೂ ನೋಡಿ, ಕರುವನ್ನು ಸರಿಯಾಗಿ ಪೋಷಿಸುವಂತೆ ಎಚ್ಚರಿಸಿ ಬರುತ್ತಿದ್ದನು.

ಹೀಗೆ ಎಂಟು ಹತ್ತು ದಿನಗಳು ಕಳೆದುವು. ಗೋಪಣ್ಣನು ಸುಮ್ಮನಿರಲಾಗದೆ ರಾಮಶರ್ಮನೊಂದಿಗೆ, "ಬ್ರಾಹ್ಮಣೋತ್ತಮಾ, ದನವು ಸರಿಯಾಗಿ ಹಾಲು ಕೊಡುತ್ತದೆಯೆ?" ಎಂದು ಕೇಳಿದನು.

"ಅಯ್ಯಾ, ಇದು ದೇವತಾಂಶವಿರುವ ದನ. ದಿನಕ್ಕೆ ನಾಲ್ಕು ಸೇರು ಹಾಲು ಕರೆಯುತ್ತದೆ" ಎಂದನು ರಾಮಶರ್ಮ.

ಸ್ವಭಾವಿಕವಾಗಿಯೇ ರಾಮಶರ್ಮನು ದಾಕ್ಷಿಣ್ಯ ಗುಣವುಳ್ಳವನು. ಗೋಪಣ್ಣನಿಗೆ ಸಂತೋಷವಾಗಲೆಂದುಕೊಂಡು, ದನವು ಕೊಡುವುದಕ್ಕಿಂತ ಇಮ್ಮಡಿಯಾಗಿಯೇ ಹೇಳಿದ್ದನು. ಅದೇ ಅವನಿಗೆ ಮುಳುವಾಗುವಂತಾಯಿತು ಪಾಪ!

ಅದನ್ನು ಕೇಳಿದ ಕೂಡಲೇ ಗೋಪಣ್ಣನಿಗೆ ಎದೆ ನಿಂತ ಹಾಗಾಯಿತು. ತನಗಿರುವ ದನಗಳಲ್ಲಿ ಯಾವ ದನವೂ ಅಷ್ಟು ಹಾಲು ಕೊಡುವುದಿಲ್ಲ.



"ಬ್ರಾಹ್ಮಣೋತ್ತಮಾ! ದನವು ಅಷ್ಟು ಹೆಚ್ಚು ಹಾಲು ಕೊಡುವುದೆಂದರೆ, ಹಾಲು ಅಷ್ಟು ರುಚಿಯಾಗಿರಲಿಕ್ಕಿಲ್ಲ. ನೀರು ಹಾಲಾಗಿದ್ದೀತು, ಅಲ್ಲವೆ?" ಎಂದನು ಗೋಪಣ್ಣ.

ರಾಮಶರ್ಮನು 'ಹೌದು ನಿಜವೇ. ಸಪ್ಪಗೆ ಸಪ್ಪಗೆ ನೀರಿನ ಹಾಗಿದೆ' ಎನ್ನುತ್ತಿದ್ದರೆ ಗೋಪಣ್ಣನಿಗೆ ತೃಪ್ತಿಯಾಗುತ್ತಿತ್ತು. ಹಾಗಿಲ್ಲದೆ ಬಹಳ ಒಳ್ಳೆಯ ದನವನ್ನು ದಾನದ ಹೆಸರಿನಲ್ಲಿ ಕಳೆದುಕೊಂಡೆನೆಂಬ ಸಂಕಟ ಅವನನ್ನು ಬಿಡುವಂತಹುದಲ್ಲ.

ಸರಳ ಗುಣದ ರಾಮಶರ್ಮ ಬಹಳ ಕೃತಜ್ಞತೆಯಿಂದ, "ಅಯ್ಯಾ! ಒಳ್ಳೆಯ ಶುದ್ಧ ಮನಸ್ಸಿನಿಂದ ದಾನ ಮಾಡಿದ ಆ ದನದ ಹಾಲಿನ ರುಚಿಯನ್ನು ಮಾತಿನಿಂದ ಹೇಳಲು ಸಾಧ್ಯವಿಲ್ಲ, ದೇವಾಮೃತವೇ. ದೇವತೆಗಳು ಸೇವಿಸುವ ಅಮೃತದ ರುಚಿ ಹೀಗೆಯೇ ಇರಬೇಕು" ಎಂದು ಹೇಳಿದನು.

ಗೋಪಣ್ಣ ಕೂಡಲೇ "ಹಾಗಾದರೆ ಆ ಹಾಲಿನ ರುಚಿಯನ್ನು ನನಗೂ ಸ್ವಲ್ಪ ತೋರಿಸುವಿರಾ?" ಎಂದನು.

ರಾಮಶರ್ಮನು ಬೇಗನೆ ಒಳಗೆ ಹೋಗಿ ಒಂದು ಲೋಟೆಯಲ್ಲಿ ಹಾಲು ತಂದು ಕೊಟ್ಟನು. ಗೋಪಣ್ಣನು ಆ ಹಾಲನ್ನು ಕುಡಿದನು. ಹಾಲು ಚೆನ್ನಾಗಿಯೇ ಇದ್ದಿತು.

ದಿಗಿಲು ಬಡಿದ ಮನಸ್ಸಿನಲ್ಲಿ ಗೋಪಣ್ಣನು ಅಲ್ಲಿಂದ ಮನೆಗೆ ಹಿಂದಿರುಗಿದನು. ಆ ದಿನ ರಾತ್ರಿ ಬೆಳತನಕ ಅವನಿಗೆ ನಿದ್ದೆ ಹತ್ತಲಿಲ್ಲ. ಎಷ್ಟೊಂದು ಒಳ್ಳೆಯ ದನವನ್ನು ದಾನವಾಗಿ ಕೊಟ್ಟೆನಲ್ಲ! ಎಂಥ ಮೂರ್ಖ ತಾನು!

ಮರುದಿನ ಬೆಳಗ್ಗೆ ಎದ್ದಕೂಡಲೇ ಗೋಪಣ್ಣನು ರಾಮಶರ್ಮನನ್ನು ಕರೆಯಿಸಿ, "ಅಯ್ಯಾ. ಬ್ರಾಹ್ಮಣೋತ್ತಮಾ, ಕೆಲವು ದಿನಗಳಿಂದ ಎಂಥದೋ ಅನಾರೋಗ್ಯದಿಂದ ಸಂಕಟಪಡುತ್ತಾ ಇದ್ದೆ. ನಿನ್ನೆ ನೀವು ಕೊಟ್ಟ ಹಾಲು ಕುಡಿದ ಕೂಡಲೇ ಒಳ್ಳೆಯ ಗುಣವು ಕಂಡುಬಂತು. ನಿಜಕ್ಕೂ ಆ ದನ ದೇವತಾಂಶವುಳ್ಳದ್ದೆ. ಆ ಹಾಲಿನಲ್ಲಿ ಅಮೃತವಿರುವ ಲಕ್ಷಣವೂ ಕಾಣುತ್ತದೆ. ಅದು ಪ್ರತಿದಿನಾ ನಾಲ್ಕು ಸೇರು ಹಾಲು ಕೊಡುವುದೆಂದಿದ್ದೀರಿ. ಆದ್ದರಿಂದ ಅದರಲ್ಲಿ ಎರಡು ಸೇರು ಹಾಲನ್ನು ನನಗೆ ಕಳುಹಿಸಿಬಿಡಿ. ನನ್ನ ಆರೋಗ್ಯ ಸರಿಯಾಗುವವರೆಗೆ ಹೀಗೆ ಕಳುಹಿಸುತ್ತಿದ್ದರೆ ಸಾಕು. ನಿಮಗೇನೂ ನಷ್ಟವಿಲ್ಲ" ಎಂದನು.

ಆ ಮಾತು ಕೇಳಿ ರಾಮಶರ್ಮನ ಗುಂಡಿಗೆಗೆ ಕಲ್ಲು ಬಿದ್ದ ಹಾಗಾಯಿತು. ಏನು ಹೇಳಬೇಕೆಂದೇ ತಿಳಿಯದೆ, ಸರಿಯೆಂದು ಹೇಳಿ ಕೊರಗುತ್ತಾ ಮನೆಗೆ ಹೋದನು.

ಗೋಪಣ್ಣ ಹೇಳಿದ ಮಾತುಗಳನ್ನು ಕೇಳಿ, ಕಾವೇರಮ್ಮ "ಏನು ಬುದ್ಧಿಯಪ್ಪಾ ನಿನ್ನದು? ದಾನ ಮಾಡಿದ ಗೋವಿನ ಹಾಲನ್ನು ತೆಗೆದು



ಕೊಂಡರೆ ನಿನಗೆ ಪುಣ್ಯವೇನೂ ಉಳಿಯದು. ಪಾಪವೇ ಬಂದೀತು" ಎಂದಳು.

"ಪುಣ್ಯ ಬಾರದೆ ಹೋಗಿದ್ದರೆ ನನ್ನ ರೋಗ ಮತ್ತೆ ಬರಬೇಕಿತ್ತು. ಹಾಗೇನೂ ಬರಲಿಲ್ಲ. ಪಾಪವೂ ಬಾರದು. ಬಂದ ಪುಣ್ಯವೂ ಹೋಗದು" ಎಂದನು ಗೋಪಣ್ಣ.

ಆ ದಿನದಿಂದ ರಾಮಶರ್ಮನು ದನವನ್ನು ಪೋಷಿಸುತ್ತ, ಅದು ಕೊಡುವ ಹಾಲನ್ನೆಲ್ಲಾ ಗೋಪಣ್ಣನಿಗೇ ಕೊಡುತ್ತ ಬಂದನು. ದಾನಿಗೆ ಸಂತೋಷವಾಗಲು ಹೇಳಿದ ಮಾತು ಅವನಿಗೆ ಹಿಂದೇಟು ಕೊಟ್ಟಿ, ಹಾಗಾಗಿತ್ತು, ಪಾಪ!

ಹಾಗೆ ಕೆಲವು ದಿನ ಕಳೆಯುವಷ್ಟರಲ್ಲಿ ಗೋಪಣ್ಣನಿಗೆ ಮತ್ತೆ ಅದೇ ಹಳೆಯ ಹೊಟ್ಟೇನೋವಿನ ರೋಗ ಎದ್ದುಕೊಂಡಿತು. ಆದರಿಂದ ಗಾಬರಿಬಿದ್ದ ಗೋಪಣ್ಣ ಕೂಡಲೇ ರಾಮಶರ್ಮನು ಕೊಡುವ ಹಾಲು ಇನ್ನು ಬೇಡವೆಂದನು. ಆದರೂ ಅವನ ರೋಗ ತಗ್ಗಲಿಲ್ಲ. ವೈದ್ಯನು ಬಂದು ಮದ್ದು ನುಂಗಿಸಿದರೂ ಲವಲೇಶವೂ ಪ್ರಯೋಜನ ಕಾಣಲಿಲ್ಲ.

ರಾಮಶರ್ಮನ ಕೈಯಿಂದ ಹಾಲು ತೆಗೆದುಕೊಳ್ಳುವುದನ್ನು ಬಿಟ್ಟಿರುವುದರಿಂದ ತನಗೆ ಗೋದಾನದ ಪುಣ್ಯ ದಕ್ಕಲೇಬೇಕಿತ್ತು. ಆದರೂ ರೋಗವೆದ್ದು ಏಕೆ ಬಾಧಿಸುತ್ತದೋ ಎಂದು ತಳಮಳಿಸಿಕೊಳ್ಳುತ್ತಿದ್ದನು ಗೋಪಣ್ಣ.

ಒಂದು ದಿನ ಗೋಪಣ್ಣನ ಮನೆಯ ಮುಂದೆ ಒಬ್ಬ ಸಾಧು ಪುರುಷನು ನಿಂತುಕೊಂಡು "ಓಹೋಯ್! ಈ ಮನೆಯಲ್ಲಿ ಪಾಪವಿದೆ! ನಿವಾರಿಸಿಕೊಳ್ಳಿರಯ್ಯಾ!" ಎಂದು ಕೂಗಿ ಹೇಳಿದನು.

ಅದನ್ನು ಕೇಳಿ ಕಾವೇರಮ್ಮ ಕೂಡಲೇ ಆ ಸಾಧುವನ್ನು ಮರ್ಯಾದೆಯಿಂದ ಒಳಗೆ ಕರೆದು ತನ್ನ ಮಗನನ್ನು ತೋರಿಸಿದಳು.

ಸಾಧು, ಗೋಪಣ್ಣನನ್ನು ಪರೀಕ್ಷಿಸಿ ನೋಡಿ, "ನಿನಗೆ ಗೋದಾನ ಮಾಡಿದ ಪುಣ್ಯ ಬರಲಿಲ್ಲ. ಅದರ ಮೇಲೆ ಹಾಲನ್ನು ಕಳವು ಮಾಡಿದ ಪಾಪವೂ ಸೇರಿಕೊಂಡಿದೆ" ಎಂದನು.

ಗೋಪಣ್ಣನು ದೀನಮುಖಿನಾಗಿ, "ಸ್ವಾಮಿ, ಹಾಗೇಕೆ ಆಯಿತು? ಇದರಲ್ಲಿರುವ ಅಂತಹ ರಹಸ್ಯವೇನು? ನಾನು ದಾನ ಮಾಡಿದ ದನವು ಕೊಡುವ ಹಾಲಿನಿಂದ ಸದ್ಬ್ರಾಹ್ಮಣನಾದ ರಾಮಶರ್ಮನು ಸುಖಪಡುತ್ತಿದ್ದಾನಷ್ಟೆ?" ಎಂದನು.

"ಎಲೋ, ನಿನ್ನಂತಹ ಲಾಭಬಡಕರಿಗೆ ತಕ್ಕ ನಿದರ್ಶನಗಳನ್ನು ಭಗವಂತನೇ ತೋರಿಸುತ್ತಾನೆ. ಗೋದಾನ ಮಾಡಿದ ಪುಣ್ಯವು ಸಂಜೀವಿನಿಯಂತೆ ಕೂಡಲೇ ಫಲಿಸಿ ನಿನ್ನ ರೋಗ ವಾಸಿಯಾಗಿದೆ. ಈ ನಿದರ್ಶನದಿಂದ ನೀನು ಬುದ್ಧಿ ತಂದುಕೊಂಡಿರುತ್ತಿದ್ದರೆ ದಾನ ಮಾಡಿದುದರಿಂದ ಪುಣ್ಯ ಬರುತ್ತದೆಂದು ನಂಬುಗೆ ಉಳಿಯುತ್ತಿತ್ತು. ಅದೇನಿಲ್ಲದೆ, ರೋಗ ವಾಸಿಯಾದ ಕೂಡಲೇ, ವಂಚನೆಯ ಬುದ್ಧಿ

ಯಿಂದ, ರಾಮಶರ್ಮನ ಕೈಯಿಂದ ಅದರ ಹಾಲನ್ನು ತರಿಸಿಕೊಳ್ಳತೊಡಗಿರುವಿ. ಆದ್ದರಿಂದ ಅದೇ ರೋಗ ಮತ್ತೆ ಬಂತು.. ಈ ರೋಗ ತಗ್ಗಿಬಿಟ್ಟರೆ ಮತ್ತೆ ಹಾಲು ಕೇಳುವಿಯೇನೋ ಎಂದು ರಾಮಶರ್ಮನಿಗೆ ಭಯವಾಗಿದೆ. ಆ ಸದ್ಬ್ರಾಹ್ಮಣನ ಭಯವೇ ರೋಗ ತಗ್ಗದಿರಲು ಕಾರಣ!" ಎಂದನು ಸಾಧು.

"ಹಾಗಾದರೆ ಈಗ ನಾನು ಏನು ಮಾಡಬೇಕು ಸ್ವಾಮಿ?" ಎಂದು ಗೋಪಣ್ಣನು ಹೆದರಿ ನಡುಗುತ್ತಾ ಕೇಳಿದನು.

"ದಾನ ಮಾಡಿದ ದನದ ಹಾಲನ್ನು ಅಪಹರಿಸುವುದು ಮಹಾ ಪಾಪ. ಅಂತಹ ಪಾಪದಿಂದ ಬಿಡುಗಡೆಯಾಗಬೇಕಾದರೆ ನೀನು ಇನ್ನೊಂದು ಗೋವನ್ನು ದಾನ ಮಾಡಬೇಕು. ಅದೂ ಅಂತಿಂಥವನಿಗೆ ಮಾಡದೆ ಒಬ್ಬ ಪುಣ್ಯಾತ್ಮನಿಗೇ ದಾನ ಮಾಡಬೇಕು" ಎಂದನು ಸಾಧು.

"ಹಾಗಾದರೆ ಇನ್ನೊಂದು ಗೋವನ್ನು ನಿಮಗೇ ದಾನ ಮಾಡಿಬಿಡುತ್ತೇನೆ" ಎಂದನು ಗೋಪಣ್ಣ.

"ನಾನು ಯಾರಿಗೂ ದಾನಧರ್ಮ ಮಾಡಿದವನಲ್ಲಪ್ಪಾ. ಆದ್ದರಿಂದ ನಾನು ಪುಣ್ಯಾತ್ಮನೆನಿಸಲಾರೆ" ಎಂದನು ಸಾಧು.

"ಹಾಗಾದರೆ ಅಂತಹ ಪುಣ್ಯಾತ್ಮನು ಯಾರೆಂದು ನೀವು ಹೇಳಬಿಡಿರಿ ಸ್ವಾಮಿ" ಎಂದನು ಗೋಪಣ್ಣ.

"ಈಗ ಈ ಗ್ರಾಮದಲ್ಲಿರುವ ಎಲ್ಲಾ ಬ್ರಾಹ್ಮಣರಿಗಿಂತಲೂ ರಾಮಶರ್ಮನೇ ಪುಣ್ಯಾತ್ಮನು. ಅವನಿಗೆ ಹಾಲನ್ನು ದಾನಮಾಡಿದ ದೊಡ್ಡ ಪುಣ್ಯ ಬೇರೆ ಬಂದಿದೆ" ಎಂದನು ಸಾಧು.

ಅದನ್ನು ಕೇಳಿ ಗೋಪಣ್ಣನಿಗೆ ಬೆಪ್ಪು ಬಡಿದಂತಾಯಿತು. ಅವನು ಮಾತಾಡದಿರಲು, ಸಾಧು ಮುಗುಳುನಗುತ್ತ, "ನೀನು ಗೋದಾನ ಮಾಡಿದಾಗ, ಆ ದಾನ ಪಡೆದವನು, ಅದರ ಹಾಲನ್ನು ಯಾರಿಗಾದರೂ ದಾನ ಮಾಡಿದರೆ ಆ ಪುಣ್ಯವು ನಿನಗೆ ಬರುತ್ತಿತ್ತು. ರಾಮಶರ್ಮನಿಂದ ನೀನೇ ದಾನ ಪಡೆದುದರಿಂದ ಅದು ಕಳ್ಳತನವಾಗಿಬಿಟ್ಟಿತು. ಆ ಕ್ಷೀರ ದಾನದ ಪುಣ್ಯ ಅವನಿಗೇ ಸೇರಿತು. ಇಷ್ಟೊಂದು ಕಹಿ ಅನುಭವದ ಮೇಲೆಯಾದರೂ ನಿನ್ನ ಈ ಲಾಭಬಡಕತನವನ್ನು ಬಿಟ್ಟುಬಿಡುವುದು ಒಳ್ಳೆಯದು" ಎಂದು ಬುದ್ಧಿ ಹೇಳಿದನು. ಗೋಪಣ್ಣನು ಸಾಧು ಹೇಳಿದಂತೆಯೇ ಮಾಡಿದನು. ಹಾಗೆ ದಾನ ಮಾಡಿದ ಎರಡು ದನಗಳೂ ಕರುಗಳೊಂದಿಗೇ ರಾಮಶರ್ಮನದೇ ಎಂದು ಭರವಸೆಯನ್ನೂ ಕೊಟ್ಟನು. ತನ್ನ ತಪ್ಪನ್ನು ಕ್ಷಮಿಸಬೇಕೆಂದೂ ಬೇಡಿಕೊಂಡನು.

ಆಮೇಲೆ ಗೋಪಣ್ಣನ ರೋಗ ವಾಸಿಯಾಯಿತು. ಅವನು ಒಳ್ಳೆಯ ಧರ್ಮಾತ್ಮನಾಗಿ ಬದಲಾವಣೆ ಹೊಂದಿ ಸುಖವಾಗಿದ್ದನು.






# ಹೊಸ ಅಶ್ವವೀರ

ಜಯಸಾಗರವೆಂಬ ದೇಶದ ರಾಜನಾದ ರತ್ನದೇವನು ಕುದುರೆಗಳ ಮೇಲೆ ಅತ್ಯಂತ ಪ್ರೀತಿಯುಳ್ಳವನು. ಅವನ ಅಶ್ವಶಾಲೆಯಲ್ಲಿ ಪರ್ಷಿಯಾ, ಅರಬ್ಬೀ ಜಾತಿಯ ಕುದುರೆಗಳೂ, ಎಲ್ಲಿಯೋ ಬರ್ಮಾ, ಸಯಾಂ, ಸಿಂಹಳ ಮೊದಲಾದ ದೇಶಗಳಿಂದ ತರಿಸಿದ ಬೆಲೆಬಾಳುವ ಕುದುರೆಗಳೂ ಅನೇಕವಿದ್ದುವು.

ಹೀಗೆ ಅನೇಕ ಜಾತಿಯ ಕುದುರೆಗಳಿಗೆ ತಕ್ಕ ಹಾಗೆ, ಅಶ್ವ ರಕ್ಷಣೆಯಲ್ಲಿ ನಿಪುಣರಾದವರೂ, ಸವಾರಿ ಮಾಡುವುದರಲ್ಲಿ ಚೆನ್ನಾಗಿ ತೇರ್ಗಡೆಯಾದವರೂ ಅನೇಕರಿದ್ದರು.

ಬೇರೆ ಬೇರೆ ಜಾತಿಯ ಕುದುರೆಗಳಿಗೆ ತಕ್ಕ ಹಾಗೆ, ದಾಣೆಗಳ ಆರಿಕೆಯಲ್ಲಿ ನಿಪುಣರಾದವರೂ, ಮಾಲೀಸು ಮಾಡುವುದರಲ್ಲಿ ಚೆನ್ನಾಗಿ ತೇರ್ಗಡೆಯಾದ ಕಾಸ್ತಾರರೂ ಅನೇಕರಿದ್ದರು.

ಆದರೆ ಬೇರೆ ದೇಶಗಳಲ್ಲಿ ಅಂಥವರು ಅನೇಕರಿರುವರೆಂದು ಚಾರರ ಮೂಲಕವಾಗಿ ಆ ರಾಜನು ತಿಳಿದು, ಅಂಥವರಿಗೆ ದೊಡ್ಡ ದೊಡ್ಡ ಆಶೆ ತೋರಿಸಿ, ತನ್ನ ಬಳಿಗೆ ಬರಮಾಡಿಸಿಕೊಳ್ಳುತ್ತಿದ್ದನು. ತನ್ನ ದೇಶದವರ ಮೇಲೆ ಅವನದು ಸಣ್ಣ ದೃಷ್ಟಿಯಾಗಿತ್ತು.

ಒಂದು ದಿನ ರತ್ನದೇವನ ಬಳಿಗೆ ಚಾರನೊಬ್ಬನು ಬಂದು, "ಮಹಾರಾಜಾ, ಇದಕ್ಕೆ ಮೊದಲು ನಾನು ಒಬ್ಬ ಕುದುರೇ ರಾವುತನೊಂದಿಗೆ ಮಾತಾಡಿದ್ದೇನೆ. ಅವನು ವೈಶಾಲೀ ರಾಜನ ಬಳಿಗೆ ಹೋಗುತ್ತಿದ್ದನು. ಅವನು ಎಲ್ಲಿಯೂ ನಿಲ್ಲದೆ ಒಂದೇ ಸಮನೆ ಎರಡು ಹಗಲೂ ಎರಡು ರಾತ್ರಿಯೂ ಕುದುರೇ ಸವಾರಿ ಮಾಡಬಲ್ಲನು. ಅವನು ವೈಶಾಲೀ ರಾಜಧಾನಿಯನ್ನು ಸೇರುವ ಮೊದಲು ದಾರಿಯಲ್ಲಿರುವ ವಿಷ್ಣುಪುರದಲ್ಲಿ ಒಂದು ವಾರ ಉಳಿದಿರುತ್ತಾನೆ. ಅಲ್ಲಿ ಅವನ ಸ್ನೇಹಿತನ ವಿವಾಹ ನಡೆಯಲಿದೆ. ಆದುದರಿಂದ ಬೇಗನೇ ಆ ಮನೆಗೆ ಹೋದರೆ ಆ ವೀರನನ್ನು ನೋಡಬಹುದು" ಎಂದು ಹೇಳಿದನು.

ಆ ಮಾತು ಕೇಳಿದ ಕೂಡಲೇ ರತ್ನದೇವನು ಬಹಳ ಉತ್ತೇಜನೆಯಿಂದ, "ಆಹಾ ! ಎಷ್ಟು ಕಾಲದ ಮೇಲೆ ನಮಗೆ ಬೇಕಾದ ಆಶ್ವಿಕನೊಬ್ಬ ಸಿಕ್ಕಿದನು ! ಎರಡು ಹಗಲು ಎರಡು ರಾತ್ರಿಗಳಷ್ಟು ಕಾಲ ಒಂದೇ ಸಮನೆ ಕುದುರೆ ಸವಾರಿ ಮಾಡಬಲ್ಲವನು ನನ್ನ ಆಸ್ಥಾನದಲ್ಲಿರುವನೆಂಬ ಕೀರ್ತಿ ದೇಶ ವಿದೇಶಗಳಲ್ಲಿ ಮಾರ್ಮೊಳಗಲಿದೆ !" ಎಂದನು.

ರಿ. ಜಯದೇವ

ಆಮೇಲೆ ರತ್ನದೇವನು ತನ್ನ ಮಂತ್ರಿಯನ್ನು ಕರೆದು, "ನೀವು ಈಗಲೇ ವೈಶಾಲೀ ನಗರದಲ್ಲಿರುವ ವಿಷ್ಣುಪುರಕ್ಕೆ ನಮ್ಮ ಅಶ್ವಿಕನೊಬ್ಬನನ್ನು ಕಳುಹಿಸಬೇಕು. ಅಲ್ಲಿರುವ ಬಹು ದೊಡ್ಡ ಕುದುರೇ ರಾವುತನನ್ನು ಕಲೆತು, ಅವನನ್ನು ನಮ್ಮ ಬಳಿಗೆ ಕರೆದುಕೊಂಡು ಬರಬೇಕು. ಆ ಹೊಸ ಮಹಾಶ್ವಿಕನು ನಮ್ಮ ಜಯಸಾಗರ ನಗರದಲ್ಲೇ ಇರುವಂತಾಗಬೇಕು. ತಡಮಾಡಬೇಡಿರಿ" ಎಂದು ಹೇಳಿದನು.

ಮಂತ್ರಿ ಏನೋ ಹೇಳಲು ಬಾಯಿ ತೆರೆಯುವುದನ್ನು ನೋಡಿ, ರತ್ನದೇವನು ಬೇಸರ ವ್ಯಕ್ತಪಡಿಸಿ, "ಏನಾದರೂ ಹೇಳಿ ಕಾಲಕಳೆಯುವ ವೇಳೆ ಇದಲ್ಲ! ತಕ್ಷಣವೇ ನಮ್ಮ ಸವಾರನೊಬ್ಬನನ್ನು ವಿಷ್ಣುಪುರಕ್ಕೆ ಓಡಿಸಿರಿ. ಅವನು ಅಲ್ಲಿರುವ ಮಹಾ ಅಶ್ವಿಕನನ್ನು ನೋಡಿ, ತಾನು ರತ್ನದೇವ ರಾಜನ ಆಸ್ಥಾನದಿಂದ ಬಂದೆನೆಂದು ಹೇಳಬೇಕು. ಆ ದೊಡ್ಡ ಕುದುರೆ ಸವಾರನಿಗೆ ನಾನು ತಿಂಗಳಿಗೆ ನೂರು ಬಂಗಾರದ ನಾಣ್ಯಗಳನ್ನು ಸಂಬಳ ಕೊಡುವೆನೆಂದು ಹೇಳಬೇಕು. ಈ ನನ್ನ ಆಜ್ಞೆಯನ್ನು ಕೂಡಲೇ ತಿಳಿಸಿ ಒಬ್ಬ ಅಶ್ವಿಕನನ್ನು ಕಳುಹಿಸಿರಿ. ಹೋಗಿರಿ!" ಎಂದು ಅವಸರಪಡಿಸಿದರು.

ಈ ರಾಜನೊಂದಿಗೆ ಏನು ಹೇಳಿಯೂ ಪ್ರಯೋಜನವಿಲ್ಲವೆಂದುಕೊಂಡು ಮಂತ್ರಿ, ಅವನು ಆಜ್ಞೆ ಮಾಡಿದ ಹಾಗೆ ಒಬ್ಬ ಕುದುರೇ ಸವಾರನಿಗೆ, ಸಂಗತಿಯನ್ನೆಲ್ಲಾ ಹೇಳಿ, ವಿಷ್ಣುಪುರಕ್ಕೆ ಕಳುಹಿಸಿದನು.

ಇದಾದ ಏಳನೇ ದಿನದಲ್ಲಿ ವಿಷ್ಣುಪುರದಿಂದ ಬಂದ ಹೊಸ ಅಶ್ವವೀರನೊಬ್ಬನು ರತ್ನದೇವನ ಬಳಿಗೆ ಬಂದು, ಅವನು ಕೊಡುವ ಸಂಬಳದಲ್ಲಿರಲು ಒಪ್ಪಿಕೊಂಡನು.

ಒಬ್ಬ ಮಹಾ ಅಶ್ವ ವೀರನು ವೈಶಾಲೀ ರಾಜಾಸ್ಥಾನದಲ್ಲಿರುವುದು ತಪ್ಪಿ, ತನ್ನ ರಾಜ್ಯದಲ್ಲಿರಲು ಒಪ್ಪಿದುದನ್ನು ನೋಡಿ, ರತ್ನದೇವ ರಾಜನಿಗಾದ ಆನಂದವು ಅಷ್ಟಿಷ್ಟಲ್ಲ.

ಆ ಹೊಸ ಅಶ್ವಿಕನು ರತ್ನದೇವನೊಂದಿಗೆ, "ಮಹಾರಾಜರೇ, ವೈಶಾಲಿಯ ಮಹಾರಾಜರು



ನನ್ನನ್ನು ತಮ್ಮ ಆಸ್ಥಾನದಲ್ಲಿ ಸೇರಬೇಕೆಂದು ಹೇಳಿ, ವಿಷ್ಣುಪುರಕ್ಕೆ ದೂತನನ್ನು ಕಳುಹಿಸಿದ್ದರು. ಆದರೆ ಅಷ್ಟರೊಳಗೆ ತಾವು ಕಳುಹಿಸಿದವನು ಬಂದು ನನ್ನನ್ನು ನೋಡಿ, ಮಾತಾಡುವಂತಾಯಿತು. ಆ ಕಾರಣದಿಂದ ವೈಶಾಲೀ ರಾಜನ ದೂತನನ್ನು ಹಿಂದೆ ಕಳುಹಿಸಿ, ನಾನು ತಮ್ಮ ಆಸ್ಥಾನದಲ್ಲಿ ಸೇರಲು ಬಂದೆನು" ಎಂದನು.

ಇದನ್ನು ಕೇಳಿದ ರತ್ನದೇವನು ಇನ್ನಷ್ಟು ಸಂತೋಷಪಟ್ಟು. ಮಂತ್ರಿಯೊಂದಿಗೆ, "ನಾವು ವಿಷ್ಣುಪುರಕ್ಕೆ ಕರುಹಿಸಿದ ಆಶ್ವಿಕನಿಗೆ ಏನಾದರೂ ಒಳ್ಳೆಯ ಬಹುಮಾನ ಕೊಡಿರಿ" ಎಂದನು.

ಅದಕ್ಕೆ ಮಂತ್ರಿ "ಮಹಾರಾಜಾ, ನಾವು ವಿಷ್ಣುಪುರಕ್ಕೆ ಕಳುಹಿಸಿದ ಆಶ್ವಿಕನು ಆ ನಗರಕ್ಕೆ ಸೇರಲು ಮೂರು ಹಗಲು ಮೂರು ರಾತ್ರಿ ಕುದುರೆಯನ್ನು ನಿಲ್ಲಿಸದೆ ಓಡಿಸಿಕೊಂಡೇ ಹೋದನು. ಈ ಸಂಗತಿಯನ್ನು ಕೇಳಿದ ವೈಶಾಲಿಯ ರಾಜನು ನಮ್ಮ ಆಶ್ವಿಕನ ಜಾಣ್ಮೆಗೆ ಅತ್ಯಾನಂದಪಟ್ಟು, ಅವನಿಗೆ ನಾವು ಕೊಡುವ ಸಂಬಳಕ್ಕಿಂತ ಹೆಚ್ಚಿಗೆ ಸಂಬಳ ಕೊಡುವೆನೆಂದು ಹೇಳಿ, ತನ್ನ ಆಸ್ಥಾನದಲ್ಲಿ ಉದ್ಯೋಗ ಕೊಟ್ಟಿದ್ದಾನೆ. ಈಗತಾನೇ ಈ ಸಮಾಚಾರ ಬಂದಿತು. ತಮಗೆ ಇದೀಗ ಹೇಳೋಣವೆಂತಲೇ ಇದ್ದೆನು" ಎಂದು ಉತ್ತರಕೊಟ್ಟನು.

ಅವನ ಮಾತು ಕೇಳಿ ರತ್ನದೇವನು ಆಶ್ಚರ್ಯಪಡುತ್ತ, "ಹಾಗೇನು! ನಮ್ಮ ದೇಶದ ಪೌರರೇ ಕೆಲವರು ಮಹಾ ಮಹಾ ಅಶ್ವ ವೀರರಾಗಿ ನಮ್ಮ ಆಸ್ಥಾನದಲ್ಲಿರುವರೇನು? ಇಷ್ಟು ಕಾಲದಿಂದ ಈ ಸಂಗತಿ ತಿಳಿಯದೆ ಹೊರ ದೇಶದವರಿಗೆ ದೊಡ್ಡ ದೊಡ್ಡ ಸಂಬಳ ವ್ಯರ್ಥವಾಗಿ ಕೊಟ್ಟ ಹಾಗಾಯಿತು!" ಎಂದನು.

"ನಿಜವೇ ಮಹಾಪ್ರಭೂ! ನನ್ನ ಅಭಿಪ್ರಾಯ ಕೂಡಾ ಹಾಗೆಯೇ" ಎಂದನು ಮಂತ್ರಿ.

"ಹಾಗಾದರೆ ನಾವು ಒಂದು ಕೆಲಸ ಮಾಡಿದರೆ ಚೆನ್ನಾಗಿರುತ್ತದೆ, ಈಗ ನಮ್ಮಲ್ಲಿ ಇರುವ ಅಶ್ವ ವೀರರೊಳಗೆ ಸ್ಪರ್ಧೆ ಇರಿಸೋಣ. ಅದರಲ್ಲಿ ಹೆಚ್ಚಿನ ನೈಪುಣ್ಯವನ್ನು ತೋರಿಸಿದವರಿಗೆ ಬಹುಮಾನ ಕೊಟ್ಟು ಪ್ರೋತ್ಸಾಹಪಡಿಸೋಣ" ಎಂದನು.

ಮಂತ್ರಿ ಒಪ್ಪಿದನು. ಹಾಗೆಯೇ ಅಲ್ಲಿ ಅಶ್ವ ವೀರರೊಳಗೆ ಸ್ಪರ್ಧೆ ನಡೆಯಿತು. ಜಯಸಾಗರದ ಆಶ್ವೀಕರು, ಹೊರ ದೇಶಗಳ ಆಶ್ವೀಕರಿಗೆ ಸರಿಸಮರಾಗಿದ್ದುದು ಮಾತ್ರವಲ್ಲದೆ, ಕೆಲವು ಅಂಶಗಳಲ್ಲಿ ಅವರಿಗಿಂತಲೂ ಎಷ್ಟೋ ಹೆಚ್ಚಿನವರೆಂಬ ಸಂಗತಿ ಹೊರಬಿದ್ದಿತು.

ಈ ಸಂಭವದಿಂದ ರತ್ನದೇವ ರಾಜನ ಅತಿರೇಕ ಭಾವನೆಗಳಿಗೆ ಹದ್ದುಬಂದಿತು.






## ೬

[ ಚಿತ್ರಸೇನನು ತನ್ನ ಅನುಚರರೊದಿಗೆ ತನ್ನ ಭವನದ ಕಡೆಗೆ ಹೋಗುತ್ತಿರುವಾಗ, ಉಗ್ರಾಕ್ಷನ ರಾಕ್ಷಸ ಸೇವಕರು ಬಂದು ಅವನನ್ನು ತಮ್ಮ ನಾಯಕನ ಬಳಿಗೆ ಕರೆದುಕೊಂಡು ಹೋದರು. ಅಲ್ಲಿ ಚಿತ್ರಸೇನನಿಗೆ ಅಮರಪಾಲ ನೆಂಬವನು ಕಂಡನು. ಅವನು ಜ್ವಾಲಾದ್ವೀಪ ವಾಸಿಗಳನ್ನು ಕುರಿತು ಕೆಲವು ರಹಸ್ಯಗಳನ್ನು ಹೇಳಿ, ಥಕ್ಕನೆ ಮೂಕನಂತಾಗಿ ಆಕಾಶದ ಕಡೆಗೆ ನೋಡಿದನು. —ಇನ್ನು ಓದಿರಿ ]

ಹೇಳುತ್ತಾ ಇದ್ದ ಅಮರಪಾಲನ ವಿಚಿತ್ರ ವರ್ತನೆಯನ್ನು ನೋಡಿ ಚಿತ್ರಸೇನನಿಗೆ ಬಹಳ ಆಶ್ಚರ್ಯವಾಯಿತು. ಉಗ್ರಾಕ್ಷನು ಮಹಾ ಕೋಪದಿಂದ ಶರೀರಾದ್ಯಂತ ಕಂಪಿಸುತ್ತ, ಕಣ್ಣು ಕೆಕ್ಕರಿಸಿ ಹಲ್ಲು ಕಡಿದು ಕಲ್ಲಿನ ಗದೆಯನ್ನು ಮೇಲೆತ್ತಿ ತಿರುಗಿಸುತ್ತ, "ಏನಾಯಿತು ನಿನಗೆ? ತಲೆ ತಿರುಗುವ ರೋಗ ನೆತ್ತಿಗೇರಿತೇ? ಈ ಗದೆಯಿಂದ ಒಂದು ಹೊಡೆದು ಸರಿಮಾಡಿಬಿಡಲೇನು? ಅಲ್ಲ ನಿನ್ನ ಗಂಟಲಲ್ಲಿ ಏನಾದರೂ ಚುಚ್ಚಿಕೊಂಡಿತೇ? ಬೊಗಳೋ!" ಎಂದು ಗರ್ಜಿಸಿದನು.

ಅಮರಪಾಲನಿಗೆ ಅದಾವುದೂ ಕೇಳಿಸಿದಂತೆ ಇರಲಿಲ್ಲ. ಸ್ವಲ್ಪವೂ ಹೆದರಲಿಲ್ಲ. ಅವನು ಆಕಾಶದ ಕಡೆಗಿದ್ದ ತನ್ನ ದೃಷ್ಟಿಯನ್ನು ಉಗ್ರಾಕ್ಷನ ಮೇಲೆ ತಿರುಗಿಸಿ, ಅವನ ಭೀಕರಾಕಾರ ನೋಡಿ ಮುಗುಳು ನಗುತ್ತ, "ಏನಿದು? ನನ್ನನ್ನು ನಿನ್ನ ಗದೆಯಿಂದ ಹೆಣ ಮಾಡುವಿಯೇನು? ಆಮೇಲೆ ನಿನ್ನ ಹೆಣ ಬೀಳಲು ಬಹಳ ಹೊತ್ತೇನಿಲ್ಲ. ಕಪಿಲಪುರವನ್ನು ಆಕ್ರಮಿಸಿದ ನಾಗವರ್ಮನ ಸಂಗತಿ ನಿನಗೆ ಗೊತ್ತಿದೆಯಷ್ಟೆ? ಅವನಿಗೆ ಸಹಾಯ ಮಾಡುವ ಜ್ವಾಲಾದ್ವೀಪ ವಾಸಿಗಳೂ, ಅವರ ಭಯಂಕರ ರಕ್ಕಸ



ಹಕ್ಕಿಗಳೂ ನಿನ್ನ ರಾಕ್ಷಸ ಶರೀರದಲ್ಲಿ ಮಾಡಿಹೋದ ಗಾಯದ ಗುರುತುಗಳನ್ನು ನೋಡಿಕೋ! ಹೀಗೆ ದುಡುಕಿ ಹಾರಬೇಡ! ಎಷ್ಟಾದರೂ ನನ್ನ ಕಿವಿಗಳ ಶಕ್ತಿ ನಿಮಗಾರಿಗೂ ಇಲ್ಲ" ಎಂದನು.

ಅಮರಪಾಲನು ತನ್ನ ಶರೀರದ ಗಾಯಗಳ ಕಟ್ಟುಗಳನ್ನು ನೋಡಿ ಅವಹೇಳನೆ ಮಾಡುತ್ತಿದ್ದಾನೆಂದು ತಿಳಿದು ಉಗ್ರಾಕ್ಷನ ಸಿಟ್ಟು ಇನ್ನಿಷ್ಟು ಜೋರೇ ಆಯಿತು. ಕಲ್ಲಿನ ಗದೆಯಿಂದ ಅಮರಪಾಲನ ತಲೆಯನ್ನು ಸದೆಬಡಿಯಲು ಹುಂಕರಿಸುತ್ತಾ ಮುಂದಡಿಯಿಟ್ಟನು.

ಅಷ್ಟರೊಳಗೆ ಚಿತ್ರಸೇನನು ಉಗ್ರಾಕ್ಷನಿಗೂ ಅಮರಪಾಲನಿಗೂ ಮಧ್ಯದಲ್ಲಿ ಹಾರಿನಿಂತು "ನಿಲ್ಲು ಉಗ್ರಾಕ್ಷಾ!" ಎಂದನು ಆಜ್ಞೆ ಮಾಡುವವನ ರಾಜ ಠೀವಿಯಲ್ಲಿ.

"ಅಲ್ಪನಾದ ಇವನು, ಈ ಮಾನವಾಧಮನು ನನ್ನಂಥವನನ್ನು ಹೀಗೂ ಗೇಲಿ ಮಾಡುವುದೇ? ಅದನ್ನು ನಾನು ಸಹಿಸುವುದೇ?" ಎಂದು ಉಗ್ರಾಕ್ಷನು ಕೋರೆಹಲ್ಲುಗಳನ್ನು ತೋರಿಸಿ ಗರ್ಜಿಸಿ ಗುರ್ರೆಂದನು.

"ಉಗ್ರಾಕ್ಷಾ, ಮಾನವರನ್ನು ಅಷ್ಟೊಂದು ಹೀನವಾಗಿ ನೋಡಬೇಡ. ಇವನು ನಮಗೆ ಸಹಾಯ ಮಾಡುತ್ತಾನೆಂತಲೇ ನನ್ನ ನಂಬುಗೆ. ಇವನ ಪೂರ್ತಿ ಪರೀಕ್ಷೆಯಾಗುವವರೆಗೂ ಸಹನೆ ವಹಿಸು. ಹಾಗೇನೂ ಇಲ್ಲವೆಂದು ತೋರಿದ ಮೇಲೆ ಇವನನ್ನು ನಿನ್ನ ಇಷ್ಟ ಬಂದ ಹಾಗೆ ಹಿಂಸಿಸಬಹುದು" ಎಂದನು ಚಿತ್ರಸೇನ.

ಚಿತ್ರಸೇನನು ಹಾಗೆ ಹೇಳಿದುದನ್ನು ಕೇಳಿ, ಅಮರಪಾಲನು ಹೆದರಿ ನಡುಗುತ್ತ, "ಮಹಾರಾಜಾ! ಇದು ಅನ್ಯಾಯ. ನೀವು ನನಗೆ ಪ್ರಾಣದಾನ ಮಾಡುವೆನೆಂದು ವಾಗ್ದಾನ ಮಾಡಿದ್ದೀರಿ. ಆ ಮಾತನ್ನು ನಂಬಿಯೇ ನಾನು ಮರದಿಂದ ಇಳಿದು ಬಂದಿದ್ದೇನೆ. ಇಲ್ಲದಿದ್ದರೆ ಈ ರಾಕ್ಷಸರ ಕೈಯಲ್ಲಿ ಸಿಕ್ಕಿಬೀಳದೆ ಅಲ್ಲಿಯೇ ಆತ್ಮಹತ್ಯ ಮಾಡಿಕೊಂಡು ಒಮ್ಮೆಗೇ ಸಾಯುತ್ತಿದ್ದೆ. ಈ ರಾಕ್ಷಸನು ಚಿತ್ರಹಿಂಸೆ ಮಾಡಿ ಸಾಯಿಸುವಂಥ ಘೋರಕ್ಕೆ ನನ್ನನ್ನು ಬಿಡಬೇಡಿ ಮಹಾರಾಜಾ! ಅದು ಮಹಾ ಪಾಪ!" ಎಂದನು ದೀನನಾಗಿ.

"ನಿನಗೆ ಪ್ರಾಣಾಪಾಯವಿಲ್ಲವೆಂದು ನಾನು ಅಭಯದಾನ ಮಾಡಿದ್ದು ನಿಜವೇ. ನೀನು ನನ್ನ ವಾಗ್ದಾನದ ಸಹಾಯ ತೆಗೆದುಕೊಂಡು ನನ್ನ ಪ್ರಶ್ನೆಗಳಿಗೆ ಪ್ರತ್ಯುತ್ತರ ಕೊಡದೆ, ಏನೋ ಮುಚ್ಚಿಟ್ಟುಕೊಳ್ಳುವವನ ಹಾಗೆ ಆಕಾಶದ ಕಡೆಗೆ ಹುಚ್ಚು ಮುಖಮಾಡಿ ನಟನೆ ತೋರಿಸುವುದರ ಅರ್ಥವೇನು? ಹೀಗೆಲ್ಲಾ ವೇಷ ತೋರಿಸುವವನ ಮುಂದೆ ನನ್ನ ವಾಗ್ದಾನವನ್ನು ಉಳಿಸಿಕೊಳ್ಳಬೇಕಾದ ಅಗತ್ಯವಿಲ್ಲವೆಂದು ತಿಳಿ!" ಎಂದನು ಚಿತ್ರಸೇನ ಕಠಿಣವಾದ ಸ್ವರದಲ್ಲಿ.



"ಕ್ಷಮಿಸಬೇಕು ಮಹಾರಾಜರೇ! ನಾನು ಈ ಕ್ಷಣದಿಂದ ನಿಮ್ಮ ಸೇವಕನು. ನಿಮ್ಮ ಅಡಿಯಾಳು. ರಾಜದ್ರೋಹಿಯಾದ ನಾಗವರ್ಮನ ಮೇಲೆ ನನಗಿನ್ನು ಯಾವ ಗೌರವಭಾವವೂ ಇಲ್ಲ. ಕ್ರೂರ ಮೃಗಗಳಂತಹ ಜ್ವಾಲಾದ್ವೀಪ ವಾಸಿಗಳೆಂದರೆ ನನಗೆ ಮೊದಲಿನಿಂದಲೂ ಕೋಪವಿತ್ತು. ಆದರೆ ನಾಗವರ್ಮನಿಗೆ ಹೆದರಿ ನಾನು ಅವರೊಂದಿಗೆ ಸೇರಿಕೊಂಡೆನು. ಇನ್ನು ಈ ಕ್ಷಣದಿಂದ ನಾನು ನಿಮ್ಮವನು ಪ್ರಭೂ. ನನ್ನ ಸೂಕ್ಷ್ಮವಾದ ಕಿವಿಗಳಿಗೆ ಆಕಾಶದಲ್ಲಿ ಏನೋ ಶಬ್ದ ಕೇಳಿದ ಹಾಗಾಯಿತು. ಅದಕ್ಕೇ ಹಾಗೇ ನೋಡಿದೆನು" ಎಂದನು ಅಮರಪಾಲ ದೀನನಾಗಿ.

"ಹಾಗಾದರೆ ಸ್ವಲ್ಪವೂ ಮರೆಮಾಜದೆ ನಿನಗೆ ತಿಳಿದುದನ್ನೆಲ್ಲಾ ಹೇಳಿಬಿಡು. ಧವಳಗಿರಿಯ ಮೇಲೆ ದಾಳಿಮಾಡಲು ಹೋದ ನಾಗವರ್ಮನ ಸೈನ್ಯದೊಂದಿಗೆ ಭಯಂಕರ ಪಕ್ಷಿಗಳಲ್ಲಿ ಸವಾರಿ ಮಾಡುವ ಜ್ವಾಲಾದ್ವೀಪ ವಾಸಿಗಳು ಕೂಡಾ ಇದ್ದಾರೆಯೆ?" ಎಂದು ಕೇಳಿದನು ಚಿತ್ರಸೇನ.

"ಇದ್ದರೂ ಇರಬಹುದು ಪ್ರಭೂ. ಕಪಿಲಪುರದ ಸಮೀಪವಿರುವ ಕಾಡಿನಲ್ಲಿ ಸುಮಾರು ನೂರು ಮಂದಿ ಭಯಂಕರ ಪಕ್ಷಿಯ ಸವಾರರು ಸ್ಥಾವರವನ್ನೇ ಏರ್ಪಡಿಸಿಕೊಂಡಿದ್ದಾರೆ. ನಾಗವರ್ಮನು ತನ್ನ ಕೆಲವರು ಪ್ರಜೆಗಳನ್ನೂ ಸಹಾಯಕರಾಗಿ ಕೊಟ್ಟಿದ್ದಾನೆ. ಅದಕ್ಕಾಗಿ ಅವರು ಅವನಿಗೆ ಈ ಸಹಾಯವನ್ನು ಮಾಡುತ್ತಾರೆ. ಇಬ್ಬರೂ ಭಯಂಕರ ಅನ್ಯೋನ್ಯರು" ಎಂದನು ಅಮರಪಾಲ.

"ಆ ಭಯಂಕರ ಪಕ್ಷಿಗಳನ್ನು ಕೊಲ್ಲಲು ಸುಲಭವಾದ ಮಾರ್ಗವೇನಾದರೂ ಇದೆಯೇನು?" ಎಂದು ಉಗ್ರಾಕ್ಷನು ಶಾಂತಸ್ವರದಿಂದ ಪ್ರಶ್ನೆ ಮಾಡಿದನು. ಈಗ ಕೋಪ ತಣಿದುದರಿಂದ, ಕೋಪಾವೇಶದಲ್ಲಿ ಉಬ್ಬಿದ ಗಾಯದ ಕಟ್ಟುಗಳು ಈಗ ಸಡಿಲಾಗಿದ್ದುವು. ಅವನು ಮತ್ತೆ ಅವುಗಳನ್ನು ಬಿಗಿಗೊಳಿಸುತ್ತಾ ಮೇಲಿನಂತೆ ಪ್ರಶ್ನೆ ಮಾಡಿದನು.

"ಇಲ್ಲದೆ ಉಂಟೇ ರಾಕ್ಷಸ ರಾಜಾ? ಬಹು ಚುರುಕಾಗಿ ತಿರುಗುವ ಅವುಗಳ ಕೊಕ್ಕುಗಳಿಗೂ, ಕಾಲ ಉಗುರುಗಳಿಗೂ ತಪ್ಪಿಸಿಕೊಳ್ಳಲು ಸಾಧ್ಯವಾದರೆ ಅವುಗಳ ಕುತ್ತಿಗೆಯನ್ನು ಒಂದು ಸಣ್ಣ ಕತ್ತಿಯ ಪೆಟ್ಟಿನಿಂದ ಕಡಿದು ಕೊಚ್ಚಿ ಹಾಕಬಹುದು. ಕುತ್ತಿಗೆಯ ವಿಷಯದಲ್ಲಿ ಅವುಗಳಿಗೂ ಇತರ ಪಕ್ಷಿಗಳಿಗೂ ವ್ಯತ್ಯಾಸವೇನೂ ಇಲ್ಲ" ಎಂದನು ಅಮರಪಾಲ.

"ಹಹ್ಹಹ್ಹಾ!" ಎಂದು ಉಗ್ರಾಕ್ಷನು ದೊಡ್ಡ ದನಿಯಿಂದ ನಕ್ಕು, "ಮುಖ್ಯ ಮರ್ಮ ಗೊತ್ತಾಯಿತು. ಈ ಸಾರಿ ಆ ದುರ್ಮಾರ್ಗಿಗಳು ಇದಿರಿಗೆ ಬರಲಿ. ನನ್ನ ಪ್ರತಾಪ ತೋರಿಸುತ್ತೇನೆ" ಎನ್ನುತ್ತಾ ತೋಳು ತಟ್ಟಿಕೊಂಡನು.

ಅಷ್ಟರಲ್ಲಿ ಕೆಲಮಂದಿ ರಾಕ್ಷಸರೂ, ಪ್ರಜೆಗಳೂ ಏನೋ ಆಪತ್ತಿನಲ್ಲಿ ಸಿಕ್ಕಿಕೊಂಡವರ ಹಾಗೆ




ಗೋಳಾಟದ ಕೋಲಾಹಲ ಮಾಡುತ್ತ "ಮಹಾರಾಜಾ! ಮಹಾರಾಜಾ! ಆಪತ್ತು! ಮಹಾ ಆಪತ್ತು!" ಎಂದು ಕೂಗುತ್ತಾ, ಅಲ್ಲಿಗೇ ಓಡೋಡಿ ಬರತೊಡಗಿದರು.

ಕೆಟ್ಟ ಪ್ರಾಣಭೀತಿಯಿಂದ ಹಾಹಾಕಾರ ಮಾಡುತ್ತ ತನ್ನ ಬಳಿಗೆ ಓಡಿಬರುವ ಜನರನ್ನೂ, ರಾಕ್ಷಸರನ್ನೂ ನೋಡಿ, ಮತ್ತೇನೋ ದೊಡ್ಡ ಗಂಡಾತರವು ಮುಗಿ ಬಿದ್ದಿತೆಂದು ಊಹಿಸಿದನು ಚಿತ್ರಸೇನ.

"ಮಹಾರಾಜಾ! ಅಲ್ಲಿಯ ಜಡೆಯಾಲದ ಮರದ ಹತ್ತಿರ ಪಶುಗಳನ್ನು ಮೇಯಿಸುತ್ತಿರುವ ನಮ್ಮ ಮೇಲೆ ಭಯಂಕರ ಪಕ್ಷಿಗಳೂ, ಹುಲಿ ಚರ್ಮದವರೂ ಬಂದು ಬಿದ್ದರು. ಅವರು ನಮ್ಮ ಪಶುಗಳನ್ನೂ ಮನುಷ್ಯರನ್ನೂ ಎತ್ತಿಕೊಂಡು ಹೋಗುತ್ತಿದ್ದಾರೆ. ನಾವು ಕೆಲವರು ಮಾತ್ರ ಹೇಗೋ ಅವರಿಂದ ತಪ್ಪಿಸಿಕೊಂಡು ಓಡಿ ಬಂದೆವು! ಅವರು ಇತ್ತ ಬಂದರೂ ಬಂದಾರು! ದೂರ ಓಡಿಬಿಡೋಣ!" ಎಂದು ಬಂದವರು ಗೋಳಾಡಿಕೊಂಡು ಹೇಳಿದರು.

ಓಡಿಬಂದ ರಾಕ್ಷಸರು ಉಗ್ರಾಕ್ಷನ ಹತ್ತಿರ, ಅದೇ ರೀತಿಯಾಗಿ ರಾಕ್ಷಸ ಕಂಠದಿಂದ ಮೊರೆಯಿಟ್ಟುಕೊಂಡರು. ಆದರೆ ಅವರು ಪಶುಗಳನ್ನು ಮೇಯಿಸಲು ಹೋದ ರಾಕ್ಷಸರಲ್ಲ. ಕಳ್ಳತನದಿಂದ ಪಶುಗಳನ್ನು ಕದ್ದೊಯ್ಯಲು ಹೊಂಚು ಹಾಕಿಕೊಂಡಿದ್ದವರು. ಹುಲಿ ಚರ್ಮಧಾರಿಗಳು ಅದೇ ಸಮಯದಲ್ಲಿ ಅಲ್ಲಿಗೆ ಬಂದು ಬಿದ್ದುದರಿಂದ ಅವರ ಕೈಯಲ್ಲಿ ಇವರೂ ಭಾರಿ ಪೆಟ್ಟು ತಿಂದು, ಮೈಯೆಲ್ಲಾ ರಕ್ತ ಮಾಡಿಕೊಂಡಿದ್ದರು.

"ಚಿತ್ರಸೇನಾ! ನಾವೀಗ ಪಶುಗಳನ್ನು ಕಾಯುವವರಿಗೆ ರಕ್ಷಣೆಯಾಗಿ ಹೋಗೋಣವೆ?" ಎಂದು ಉಗ್ರಾಕ್ಷನು ನಿರುತ್ಸಾಹದ ಸಪ್ಪಗಿನ ದನಿಯಲ್ಲಿ ಕೇಳಿದನು.

"ಹೋಗದೆ ಮತ್ತೇನು ಮಾಡುವುದು? ಆ ದುಷ್ಟರು ನಮ್ಮ ಪ್ರಜೆಗಳನ್ನು ಹಿಂಸಿಸುತ್ತಿರುವಾಗ, ತಿಳಿದೂ ಸುಮ್ಮನಿರಲು ಸಾಧ್ಯವೇನು?" ಎಂದನು ಚಿತ್ರಸೇನ ಕೋಪದ ಧ್ವನಿಯಲ್ಲಿ.

ಚಿತ್ರಸೇನನು ಕೂಡಲೇ ಜಡೆಯಾಲದ ಮರದ ದಿಕ್ಕಿಗೆ ಹೊರಟೇಬಿಟ್ಟನು. ಉಗ್ರಾಕ್ಷನು ಮುಖದಲ್ಲಿ ಗಾಂಭೀರ್ಯವನ್ನು ಕಡ ತಂದುಕೊಂಡು, "ಊಂ, ಬನ್ನಿ! ಆ ಕ್ರೂರರನ್ನು ನೆಲಸಮ ಮಾಡೋಣ!" ಎನ್ನುತ್ತಾ, ಅವನ ಹಿಂದೆಯೇ ಹೊರಟನು.

ಮರಗಳ ಮರೆಯಿಂದಾಗಿ ಎಲ್ಲರೂ ಸ್ವಲ್ಪದೂರ ನಡೆಯುತ್ತಿರಲು, ಅಮರಪಾಲನು ಮುಂದೆ ಬಂದು ಚಿತ್ರಸೇನನೊಂದಿಗೆ, "ಮಹಾರಾಜಾ, ನನ್ನದೊಂದು ವಿನಂತಿ. ಇಷ್ಟು ಹೊತ್ತಿಗೆ ಹುಲಿರಾಯರುಗಳು ತಮ್ಮ ಕೆಲಸ ಮುಗಿಸಿಕೊಂಡು ಹೋಗಿರುತ್ತಾರೆ. ಒಂದು ವೇಳೆ ಅವರೆಲ್ಲಾ ಅಲ್ಲಿಯೇ ಇದ್ದರೂ ನಾವು ಅವರನ್ನು ಏನು ಮಾಡಲಿಕ್ಕೂ ಸಾಧ್ಯವಾಗದು.

ಆ ಭಯಂಕರ ಪಕ್ಷಿಗಳ ಬೆಂಬಲದಲ್ಲಿರುವವರನ್ನು ಇದಿರಿಸುವುದೆಂದರೆ ಆತ್ಮಹತ್ಯೆಗೆ ಸಮಾನವೇ ಆದೀತು !" ಎಂದನು.

ಉಗ್ರಾಕ್ಷನು ಅದಕ್ಕೆ ಒಪ್ಪುವಂತೆ ತಲೆಯಾಡಿ ಸುತ್ತಾ, "ಹೌದು ಚಿತ್ರಸೇನಾ, ಈ ಅಮರಪಾಲನು ಹೇಳುವುದರಲ್ಲಿ ಬಹಳ ಅರ್ಥವಿದೆ. ನಾವು ದುಡುಕಿ ಬಿಡಬಾರದು. ರಾತ್ರಿಯಲ್ಲಿ ನಡೆದ ಸಂಗತಿ ನೆನಪಿದೆ ಯಷ್ಟೆ ?" ಎಂದನು.

ಹೀಗೆ ಅವರಿಬ್ಬರ ಮಾತು ಕೇಳಿದ ಮೇಲೆ ಚಿತ್ರ ಸೇನನಿಗೆ ತಾನು ಮಾಡುವುದು ದುಸ್ಸಾಹಸ ವಾದೀತೆಂಬ ಅನುಮಾನವುಂಟಾಯಿತು.

ವ್ಯರ್ಥವಾಗಿ ತನ್ನ ಅನುಚರರನ್ನೂ ರಾಕ್ಷಸ ರನ್ನೂ ಪ್ರಾಣಾಪಾಯಕ್ಕೆ ಗುರಿಪಡಿಸುವುದರ ಹೊರತು ಲಾಭವೇನಿಲ್ಲವೆನಿಸಿತು. ಜ್ವಾಲಾದ್ವೀಪ ವಾಸಿಗಳೊಂದಿಗೆ ಜಗಳ ಕಟ್ಟಿಕೊಂಡು ಸಾಧಿಸು ವಂಥಾದ್ದೇನೂ ಇಲ್ಲವೆಂದು ತೋರಿತು. ಆದರೆ ತಾನು ರಾಜನಾಗಿದ್ದು, ತನ್ನ ಪ್ರಜೆಗಳಿಗೆ ರಕ್ಷಣೆ ನೀಡಲಾಗದ ಅಸಹಾಯಕ ಸ್ಥಿತಿಯಲ್ಲಿ ಇನ್ನೆಷ್ಟು ಕಾಲ ರಾಜ್ಯಪಾಲನೆ ಮಾಡಲಾದೀತು ? ತನ್ನ ತಂದೆಯ ರಾಜ್ಯದ ಮೇಲೆ ದಾಳಿ ಮಾಡುವ ನಾಗವರ್ಮನು, ಅಲ್ಲಿ ವಿಜಯ ಸಾಧಿಸಿಕೊಂಡ ಕೂಡಲೇ ತನ್ನ ನಗರದ ಮೇಲೆಯೂ ಬೀಳದೆ ಸುಮ್ಮನಿರುವನೆ ?

ಇಂತಹ ಸಂಶಯಗಳಿಂದ, ಭಯಗಳಿಂದ ಚಿತ್ರ ಸೇನನು ಚಿಂತಿಸುತ್ತಿರುವಾಗ ಅಮರಪಾಲನು, "ಮಹಾರಾಜಾ ! ನಾನು ನಿಮ್ಮ ವಿಶ್ವಾಸದ ಸೇವಕ ನೆಂದು ಹೇಳಿದ್ದೇನೆ. ನೀವು ಬೆಂಕಿಗೆ ಹಾರಲು ಹೇಳಿದರೆ ಒಂದು ಮುಂದು ನೋಡದೆ ಹಾರಿಬಿಡುತ್ತೇನೆ. ನನ್ನ ಮಾತನ್ನು ನಂಬಿರಿ. ನಾವು ಮೊದಲು, ಕಪಿಲ ಪುರದ ಪಕ್ಕದ ಕಾಡಿನಲ್ಲಿ ಸ್ಥಾವರವನ್ನು ಮಾಡಿ ಕೊಂಡ ಭಯಂಕರ ಪಕ್ಷಿಗಳನ್ನು, ಕಪಟೋಪಾಯ



ವನ್ನು ಪ್ರಯೋಗಿಸಿ ನಾಶಮಾಡಿಬಿಡಬೇಕು. ಆಮೇಲೆ ಈ ಹುಲಿರಾಯರುಗಳನ್ನು ಹತಮಾಡು ವುದು ಕಷ್ಟವಲ್ಲ" ಎಂದನು.

"ಅಲ್ಲಿ ಸುಮಾರು ನೂರು ರಕ್ಕಸ ಹಕ್ಕಿಗಳಿವೆ ಎಂದಿರುವೆ. ನಿನ್ನೆ ಎರಡು ಹಕ್ಕಿಗಳೇ ಅಷ್ಟೆಲ್ಲಾ ಘೋರ ಮಾಡಿರುವಾಗ ನೂರು ಹಕ್ಕಿಗಳನ್ನು ಹೇಗೆ ಕೊಲ್ಲಲು ಸಾಧ್ಯ ?" ಎಂದನು ಚಿತ್ರಸೇನ.

"ಆ ಪಕ್ಷಿಗಳನ್ನು ಕೊಲ್ಲಲು ಸುಲಭವಾದ ಒಂದು ಉಪಾಯವಿದೆ ಮಹಾರಾಜರೇ" ಎಂದನು ಅಮರಪಾಲ.

"ಅದೆಂಥದು ?" ಎಂದನು ಆತುರದಿಂದ ಚಿತ್ರಸೇನ.

ಅಮರಪಾಲನು ಕೋಪದ ಕಣ್ಣುಗಳಿಂದ ಉಗ್ರಾಕ್ಷ ನನ್ನು ಒಮ್ಮೆ ನೋಡಿ, ಆಮೇಲೆ ಚಿತ್ರಸೇನ ನೊಂದಿಗೆ, "ಮಹಾರಾಜರೇ, ಕಪಿಲಪುರದ ಹತ್ತಿರ ವಿರುವ ಕಾಡಿನೊಳಗೆ ಭಯಂಕರ ಪಕ್ಷಿಗಳು ಕೆಲವು



ಇವೆಯೆಂದು ಹೇಳಿದೆನಷ್ಟೆ? ಅವು ದೊಡ್ಡ ದೊಡ್ಡ ಕೊಟ್ಟಿಗೆಗಳಲ್ಲಿ ಕಾಲಿಗೆ ಬಲವಾದ ಸಂಕಲೆಗಳಿಂದ ಬಂಧಿಸಲ್ಪಟ್ಟು, ಮರದ ದಿಮ್ಮಿಗಳಿಗೆ ಕಟ್ಟಲ್ಪಟ್ಟಿವೆ. ಅವುಗಳಲ್ಲಿ ಸವಾರಿ ಮಾಡುವಂಥವರು ಅಲ್ಲಿಯೇ ಹತ್ತಿರದಲ್ಲಿರುವ ಗುಡಿಸಲುಗಳಲ್ಲಿರುತ್ತಾರೆ. ಆ ರಕ್ಕಸ ಪಕ್ಕಿಗಳು ಕೊಟ್ಟಿಗೆಗಳಲ್ಲಿರುವಾಗಲೇ ನಾವು ಅವುಗಳನ್ನು ಕೊಲ್ಲಬೇಕು" ಎಂದನು.

"ಚೆನ್ನಾಗಿದೆ ಉಪಾಯ! ಆದರೆ ಅವುಗಳನ್ನು ಹೇಗೆ ಕೊಲ್ಲುವುದೆಂಬುದೇ ಸಮಸ್ಯೆ?" ಎಂದನು ಚಿತ್ರಸೇನ.

"ಅದಕ್ಕೆ ಒಂದು ಉಪಾಯವನ್ನು ನಾನು ಆಲೋಚಿಸಿಟ್ಟಿದ್ದೇನೆ. ಅವುಗಳನ್ನು...." ಎಂದು ಅಮರಪಾಲನು ಮೆಲ್ಲದನಿಯಿಂದ ಚಿತ್ರಸೇನನೊಂದಿಗೆ ಹೇಳಲಿರುವಾಗ, ಇದಿರಿನಲ್ಲಿದ್ದ ಮರಗಳಾಚೆಯಲ್ಲಿ ಒಮ್ಮೆಗೇ ದೊಡ್ಡ ಕೋಲಾಹಲವು ಕೇಳ ತೊಡಗಿತು.

ಚಿತ್ರಸೇನನೂ, ಉಗ್ರಾಕ್ಷನೂ, ಅನುಚರರೂ ಆ ಕಡೆಗೆ ಓಡಿದರು. ಅವರು ಮರಗಳ ಗುಂಪನ್ನು ಸೇರಿ, ಕೊಂಬೆಗಿಡಗಳನ್ನು ಸರಿಸಿಕೊಂಡು ಮುಂದಕ್ಕೆ ನೋಡಿದಾಗ ಬೀಭತ್ಸವಾದೊಂದು ದೃಶ್ಯವು ಕಣ್ಣಿಗೆ ಬಿದ್ದು ತಟಸ್ಥಗೊಳಿಸಿತು.

ಕೆಲವು ಭಯಂಕರ ಪಕ್ಷಿಗಳು ಕುರಿಗಳನ್ನೂ, ಹಸುಗಳನ್ನೂ ಉಗುರುಗಳಿಂದ ಹಿಡಿದುಕೊಂಡು ಕೋಳಿಮರಿಗಳನ್ನು ಎತ್ತಿಕೊಂಡು ಹೋಗುವ ಹದ್ದುಗಳಂತೆ ಆಕಾಶಕ್ಕೆ ಎಗರಿ ಹೋಗುತ್ತಿದ್ದುವು. ಹುಲಿಚರ್ಮ ತೊಟ್ಟವರು ಅವುಗಳ ರೆಕ್ಕೆಗಳ ಮೇಲೆ ಕುಳಿತು ದೊಡ್ಡ ದನಿಯಿಂದ ಕೇಕೇ ಹಾಕುತ್ತಾ, ಓಡಿಹೋಗುವ ದನಗಾಹಿಗಳ ಮೇಲೆ ಶೂಲಗಳನ್ನು ಬೀಸಿ ಒಗೆಯುತ್ತಿದ್ದರು. ಒಬ್ಬೊಬ್ಬ ಹುಲಿಚರ್ಮದವನ ಹತ್ತಿರವೂ ಒಂದೊಂದು ಶೂಲಗಳ ಕಟ್ಟೇ ಇದ್ದಿತು. ದನಕಾಯುವವರಲ್ಲಿ ಧೈರ್ಯ ಸಾಹಸವುಳ್ಳವರು ನಿಂತು ಕವಣೆಗಳಿಂದ ಅವರ ಮೇಲೆ ಕಲ್ಲು ಬೀಸಿಕೊಂಡಿದ್ದರು. ಪಶುಗಳೂ, ಕುರಿಗಳೂ ಚೆಲ್ಲಾ ಚೆದರಾಗಿ ಓಡುತ್ತಿದ್ದುವು.

ಈ ಭಯಂಕರ ದೃಶ್ಯವನ್ನು ನೋಡಿ ಚಿತ್ರಸೇನನು ನಡುಗಿಬಿಟ್ಟನು. ಉಗ್ರಾಕ್ಷನು ಕ್ರೋಧದಿಂದ ಒಂದುಸಾರಿ ಮೈಮುರಿದು ಕಲ್ಲಿನ ಗದೆಯನ್ನು ಬಲವಾಗಿ ಭೂಮಿಗೆ ಗುದ್ದಿ, ಬಾಯಿತೆರೆದು ಗರ್ಜಿಸುವುದರೊಳಗೆ ಚಿತ್ರಸೇನನು ಅವನ ಬಾಯಿಯನ್ನು ಮುಚ್ಚಿತಡೆದು, "ಎಲ್ಲಾ ಮುಗಿದು ಹೋದ ಮೇಲೆ, ಈಗ ಆ ಕ್ರೂರರು ಮತ್ತೆ ನಮ್ಮ ಮೇಲೆ ಬೀಳುವ ಹಾಗೆ ಕೂಗಿ ಬೀಗಿ ಲಾಭವಿಲ್ಲ. ಮೇಲಾಗಿ ನಷ್ಟವೆ. ನಾವೀಗ ಮಾಡಬಹುದಾದುದು, ಗಾಯಪಟ್ಟ ದನಗಾಹಿಗಳಿಗೆ ಉಪಚಾರಮಾಡಿ ಕಟ್ಟುಕಟ್ಟಿ, ಮನೆಗೆ ಸೇರಿಸುವುದೇ" ಎಂದನು.

ಚಿತ್ರಸೇನನ ಮಾತು ಕೇಳಿದ ಕೂಡಲೇ ಅವನ ಅನುಚರರು ಕೆಲವರೂ, ರಾಕ್ಷಸರೂ ಓಡುತ್ತಾ

ಹೋದರು. ಅಷ್ಟರೊಳಗೆ ಚಿತ್ರಸೇನನು ಅವರನ್ನು ತಡೆದು, "ಮೊದಲು ಆ ದುಷ್ಟರೆಲ್ಲ ಇಲ್ಲಿಂದ ಹೊರಟು ಹೋಗಲಿ. ಅವಸರಪಟ್ಟು ಪ್ರಯೋಜನವಿಲ್ಲ" ಎಂದನು.

ನೋಡುತ್ತಿದ್ದ ಹಾಗೆ ಜ್ವಾಲಾದ್ವೀಪ ವಾಸಿಗಳು ತಮ್ಮ ತಮ್ಮ ಪಕ್ಷಿವಾಹನಗಳ ಮೇಲೆ ಆಕಾಶದಲ್ಲಿ ಹಾರಿಹೋದರು.

ಅವರೆಲ್ಲ ಕಣ್ಣಿಗೆ ಕಾಣಿಸದಷ್ಟು ದೂರ ಹೊರಟು ಹೋದ ಮೇಲೆ, ರಾಕ್ಷಸರೂ ಚಿತ್ರಸೇನನ ಕಡೆಯವರೂ ಮುಂದಕ್ಕೆ ಹೋಗಿ ಗಾಯಗೊಂಡು ನರಳುತ್ತ ಬಿದ್ದವರಿಗೆ ಅವಸರದ ಚಿಕಿತ್ಸೆ ಮಾಡಿ, ಕಟ್ಟುಕಟ್ಟಲು ತೊಡಗಿದರು.

ಉಗ್ರಾಕ್ಷನು ನಿರುತ್ಸಾಹದಿಂದ ಒಂದು ಮರದ ಬೊಡ್ಡೆಗೆ ಒರಗಿ ಕುಳಿತು "ಚಿತ್ರಸೇನಾ, ನನಗೆ ಎಂದಿಗೂ ಇಲ್ಲದಂಥಾ ಭಯ ಅದೇಕೋ ಗೊತ್ತಾಗದ ಹಾಗೆ ಏಳುತ್ತಾ ಇದೆ. ನಮ್ಮ ರಾಜ್ಯಕ್ಕೆ ಈ ಮಹಾಮಾರಿಗಳ ಪೀಡೆ ಬಿಟ್ಟು ಹೋಗುವ ಉಪಾಯವೇನಾದರೂ ಆಲೋಚಿಸಲೇಬೇಕು. ಹೀಗೆಯೇ ನೋಡಿಕೊಂಡಿದ್ದರೆ ದಿನದಿಂದ ದಿನಕ್ಕೆ ವಿಪರೀತವಾಗುತ್ತಾ ಹೋಗುತ್ತದೆ. ನಮ್ಮ ಕಣ್ಣೆದಿರೇ ಹೀಗಾಗುವುದಕ್ಕಿಂತ ಹೆಚ್ಚಿನ ಕೀಳ್ತನವೆ ನಿದೆ? ಎಂಥ ಅವಮಾನವಿದು!" ಎಂದನು.

"ನಿಜ ನಿಜ. ನೋಡಲೇಬೇಕು" ಎಂದು ಚಿತ್ರಸೇನನು ಅಮರಪಾಲನ ಕಡೆಗೆ ತಿರುಗಿ, "ಅಮರಪಾಲಾ, ಆ ಭಯಂಕರ ಪಕ್ಷಿಗಳನ್ನು ಕಟ್ಟಿದ್ದ ಜಾಗದಲ್ಲೇ ಕೊಲ್ಲಬೇಕೆಂದೆಯಷ್ಟೆ? ಅದಕ್ಕೇನೋ ಉಪಾಯವಿದೆಯೆಂದಿರುವೆ. ಏನದು?" ಎಂದು ಕೇಳಿದನು.

"ಆ ರಕ್ಕಸ ಹಕ್ಕಿಗಳನ್ನು ದಿಮ್ಮಿಗಳಿಗೆ ಕಟ್ಟಲ್ಪಟ್ಟಿರುವಾಗ, ಅವುಗಳ ಕೊಟ್ಟಿಗೆಗಳಿಗೆ ಬೆಂಕಿ ಹಚ್ಚಬೇಕು. ಅದರ ಹೊರತು ಬೇರೆ ಉಪಾಯವಿಲ್ಲ" ಎಂದನು ಅಮರಪಾಲ.

"ಅದು ಸಾಧ್ಯವಾಗುವ ಕೆಲಸವೆನ್ನುವಿಯಾ? ಆ ಕೊಟ್ಟಿಗೆಗಳ ಸುತ್ತಲೂ ವಾಹಕರ ಕಾವಲು ಇದ್ದೇಯಿದೆಯಷ್ಟೆ?" ಎಂದನು ಚಿತ್ರಸೇನ.

"ಸಾಧ್ಯವಿಲ್ಲವೆಂದರೇನು ಮಹಾರಾಜಾ? ನನ್ನೊಂದಿಗೆ ನಾಲ್ಕೈದು ಮಂದಿ ಸೈನಿಕರನ್ನು ಕಳುಹಿಸಿರಿ. ಅವರೊಂದಿಗೆ ನಾನು ಕಪಿಲಪುರದ ಕಾಡಿನೊಳಗೆ ಹೋಗಿ, ಕಾವಲುಗಾರರನ್ನು ಹತಮಾಡಿ, ಆ ಭಯಂಕರ ರಕ್ಕಸ ಹಕ್ಕಿಗಳನ್ನು ಸಜೀವವಾಗಿ ದಹಿಸಿಬಿಡುತ್ತೇನೆ. ಅವುಗಳ ಬೂದಿ ಅಡವಿಗೆ ಒಳ್ಳೆಯ ಈಟಾಗುವಂತೆ ಮಾಡಿಸುತ್ತೇನೆ. ನಿಮ್ಮದೊಂದು ಅಪ್ಪಣೆ ಕೊಡಿರಿ ಪ್ರಭೂ!" ಎಂದನು ಅಮರಪಾಲ.

—(ಇನ್ನೂ ಇದೆ)





# ವಾಗ್ದಾನ ಭಂಗ

ಇನ್ನು ತನ್ನಿಂದ ಸಾಧ್ಯವಿಲ್ಲವೆಂಬುದನ್ನರಿಯದ ರಾಜಾ ತ್ರಿವಿಕ್ರಮನು ಮರದ ಮೇಲೆ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ತನ್ನ ಹೆಗಲಿನ ಮೇಲೆ ಹಾಕಿಕೊಂಡು ಎಂದಿನಂತೆ ಮೌನಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯುತೊಡಗಿದನು. ಆಗ ಶವದೊಳಗೆ ಸೇರಿಕೊಂಡಿದ್ದ ಬೇತಾಳವು ಮತ್ತೆ ಅವನನ್ನು ಮಾತಾಡಿಸಬೇಕೆಂದುಕೊಂಡು, "ಎಲೈ ಮಹಾರಾಜನೇ, ಇನ್ನೂ ಹಟಬಿಡದೆ ಈ ನಡುರಾತ್ರಿಯ ಹೊತ್ತಿನಲ್ಲಿ ಒಬ್ಬಂಟಿಗನಾಗಿ ನೀನು ಸ್ಮಶಾನದ ಅಲೆದಾಟ ಬಿಡದಿರುವುದನ್ನು ನೋಡಿದರೆ ನೀನು ಯಾವುದೋ ಒಂದು ಮಹತ್ವದ ಕಾರ್ಯವನ್ನು ಸಾಧಿಸಲು ನಿಶ್ಚಯಿಸಿರುವಂತೆಯೇ ಕಾಣುತ್ತದೆ. ನಿನ್ನ ಹಟವು ಆ ಕಾರ್ಯವು ಸಫಲವಾಗುವವರೆಗೂ ಹೀಗೆಯೇ ನೆಲೆಸಿರುವುದೆಂದು ನಂಬುವಿಯಾ? ಲೋಕದಲ್ಲಿ ಯಾವುದನ್ನು ಸಾಧಿಸಬೇಕಾದರೂ ಮನುಷ್ಯನಿಗೆ ಸ್ಥಿರಬುದ್ಧಿಯೂ, ನೀತಿಯು ಪ್ರವರ್ತನೆಯೂ, ಕೊಟ್ಟ ಮಾತನ್ನು ಪಾಲಿಸುವಂತಹ ಪ್ರಾಮಾಣಿಕತೆಯೂ ಅತ್ಯಗತ್ಯ. ಅವುಗಳಿಲ್ಲದವನು ಏನೋ ಕುಂಟು ನೆಪಗಳಿಂದ ಮಧ್ಯದಲ್ಲೇ ಸಾಧ್ಯವಿಲ್ಲ

ಬೇತಾಳಕಥೆಗಳು



ವೆಂದು ತೊಟ್ಟ ಕಾರ್ಯ ಬಿಟ್ಟುಬಿಡಬೇಕಾಗುತ್ತದೆ. ಇದಕ್ಕೆ ಉದಾಹರಣೆಯಾಗಿ ವಿಜಯಪುರಿ ರಾಜಕುಮಾರಿಯ ಕಥೆ ಹೇಳುತ್ತೇನೆ. ಕೇಳುತ್ತಾ ನಡೆದರೆ ನಡೆಯುವ ಕಷ್ಟ ತಿಳಿಯಲಾರದು " ಎಂದು ಕಥೆಯನ್ನು ಪ್ರಾರಂಭಿಸಿತು :

ಒಂದು ದಿನ ಸಾಯಂಕಾಲದ ಹೊತ್ತಿನಲ್ಲಿ ವಿಜಯಪುರಿಯ ರಾಜಕುಮಾರಿ ಸುವರ್ಣದೇವಿ, ತನ್ನ ಸೋದರಮಾವಂದಿರ ಮನೆಯಿಂದ ಮೇನೆಯಲ್ಲಿ ಕುಳಿತು ರಾಜಧಾನಿಗೆ ಹಿಂದಿರುಗಿ ಬರುತ್ತಾ ಇದ್ದಳು. ದೃಢಕಾಯರಾದ ನಾಲ್ವರು ಬೋಯಿಗಳು ಅವಳ ಮೇನೆಯನ್ನು ಹೊತ್ತುಕೊಂಡು ನಡೆಯುತ್ತಿದ್ದರು. ಅವಳ ಗೆಳತಿಯರೂ, ಅಂಗರಕ್ಷಕ ಭಟರೂ ಮುಂದೆಯೂ ಹಿಂದೆಯೂ ಎರಡು ಪಕ್ಕಗಳಲ್ಲಿಯೂ ನಡೆಯುತ್ತಿದ್ದರು. ಅಡಿಗಳ ತಾಳಕ್ಕೆ ಸರಿಯಾಗಿ ಬೋಯಿಗಳ ಬಾಯಿಯಿಂದ ಒಂದು ಬಗೆಯ ಹೋಂಕಾರ ಧ್ವನಿ ಹೊರಡುತ್ತಿದ್ದಿತು.

ರಾಜಧಾನಿಗೆ ಇನ್ನೂ ಒರಡು ಹರದಾರಿಗಳಿರುವಾಗ ಅವರು ಒಂದು ಬೆಟ್ಟದ ಕಣಿವೆ ದಾರಿಯೊಳಗೆ ಪ್ರವೇಶಿಸಿದರು. ಕಣಿವೆಯ ಎರಡು ಬದಿಗಳಲ್ಲಿ ಎತ್ತರದವರೆಗೆ ಬಂಡೆಗಲ್ಲುಗಳಿದ್ದುವು. ಕೆಲವು ದೊಡ್ಡ ದೊಡ್ಡ ಬಂಡೆಗಳು ಅಲ್ಲಲ್ಲಿ ಒರಗಿಕೊಂಡಿದ್ದುವು. ಆಗ ಇದ್ದಕ್ಕಿದ್ದ ಹಾಗೆ ಆ ಬಂಡೆಗಳ ಹಿಂದಿನಿಂದ ಭೀಕರವಾದ ಕೇಕೆ ಶಬ್ದಗಳು ಹೊರಟುವು. ರಾಜಕುಮಾರಿಯ ಅಂಗರಕ್ಷಕರು ಅತ್ತಕಡೆಗೆ ನೋಡುವುದರೊಳಗೆ ದಾರಿದೋಚುವ ಕೆಲಮಂದಿ ಕಳ್ಳರು ಕತ್ತಿ ಈಟಿಗಳನ್ನು ಝಳಪಿಸುತ್ತ ಬಡಬಡನೆ ಇಳಿದು ಬಂದು ಮೇನೆಯನ್ನು ಮುತ್ತಿದರು. ಗಡಿಬಿಡಿಯ ರಣಕಳವಾಯಿತು ಆ ಪ್ರದೇಶ.

ಅಂಗರಕ್ಷಕ ಭಟರು ಕಳ್ಳರನ್ನು ಹೊಡೆದೋಡಿಸಲು ಸೆಣಸಾಡತೊಡಗಿದರು. ಆದರೆ ಅವರಿಗಿಂತಲೂ ಸಂಖ್ಯೆಯಲ್ಲಿ ಹೆಚ್ಚಾಗಿರುವ ಕಳ್ಳರು ರಾಜಭಟರನ್ನು ಸುಲಭದಲ್ಲಿ ಸೋಲಿಸಿ ರಾಜಕುಮಾರಿ ಸುವರ್ಣದೇವಿಯ ಮೇನೆಯ ಬಾಗಿಲನ್ನು ತೆರೆಯಲು ಮುಂದಾದರು. ಚೀರಾಡುವ ಗೆಳತಿಯರನ್ನು ಸುಮ್ಮನಿರುವಂತೆ ಕಳ್ಳರು ಹೆದರಿಸತೊಡಗಿದರು.

ಆ ಕ್ಷಣದಲ್ಲಿ ಬೆಟ್ಟದ ಇಳಿಜಾರಿನಲ್ಲಿ ಭೀತಿ ಹುಟ್ಟಿಸುವ ಕರ್ಕಶ ಕಂಠಗಳ ಕೂಗುಗಳಿಂದ ಬಂಡೆಗಲ್ಲುಗಳನ್ನು ಹೊರಳಿಸುತ್ತಾ ಕೆಲವರು ಬರುವುದು ಕಂಡಿತು. ಆ ಬಂಡೆಗಳ ಅಡಿಯಲ್ಲಿ ಸಿಕ್ಕಿ ಕಳ್ಳರ ನಾಯಕನೂ, ಮತ್ತಿಬ್ಬರು ಕಳ್ಳರೂ ಸತ್ತರು. ಉಳಿದ ಕಳ್ಳರಿಗೆ ಮತ್ತೇನು ಬಂತೆಂದು ಗಾಬರಿಯಾಯಿತು.

ಆ ಹೊಸಬರನ್ನು ನೋಡಿ ಕಳ್ಳರು ಹೆದರಿ ಓಡಿಹೋಗಲು ದಿಕ್ಕು ನೋಡುವಾಗ, ಕೆಲಮಂದಿ ಯುವಕರು ಕತ್ತಿ ಹಿರಿದು ಬಂಡೆಗಲ್ಲುಗಳ ಮೇಲಿನಿಂದ ಹಾರುತ್ತ ಬಂದು ಓಡಲಿರುವ ಕಳ್ಳರನ್ನು ಮುತ್ತಿಕೊಂಡರು. ಅದನ್ನು ನೋಡಿ ಆಶ್ಚರ್ಯಪಡುತ್ತಿದ್ದ ರಾಜಕುಮಾರಿಯ ಅಂಗರಕ್ಷಕರು ಕೂಡಾ

ಹೊಸ ಧೈರ್ಯ ತಂದುಕೊಂಡು ಕಳ್ಳರ ಮೇಲೆ ಬಿದ್ದರು. ಕೆಲವು ಕ್ಷಣದಲ್ಲಿ ಕಳ್ಳರ ಆಯುಧಗಳನ್ನೆಲ್ಲಾ ಕಿತ್ತುಕೊಂಡರು. ಏನು ಮಾಡಲಿಕ್ಕೂ ಕಳ್ಳರಿಂದಾಗಲಿಲ್ಲ. ಎಲ್ಲ ಕಳ್ಳರೂ ಸಿಕ್ಕಿಬಿದ್ದರು.

ರಾಜಕುಮಾರಿ ಸುವರ್ಣದೇವಿಯ ರಕ್ಷಣೆಗೆ ಬಂದಂತೆ ಬಂದ ಈ ಯುವಕರು, ರಾಜಧಾನಿಯಲ್ಲಿ ನಡೆದ ಯುದ್ಧ ವಿದ್ಯೆಗಳ ಪ್ರದರ್ಶನದಲ್ಲಿ ಭಾಗವಹಿಸಿ, ತಮ್ಮ ತಮ್ಮ ಪ್ರಾಂತಗಳಿಗೆ ಹಿಂದಿರುಗಿ ಹೋಗುವವರಾಗಿದ್ದರು. ಅವರ ನಾಯಕನ ಹೆಸರು ಶೇಖರನೆಂದು. ಅವನು ಕೆಲವು ತಿಂಗಳ ಕೆಳಗೆ ವಿಜಯಪುರಿ ರಾಜ್ಯದೊಳಗಿನ ಮಲ್ಲರನ್ನೆಲ್ಲಾ ಸೋಲಿಸಿ, ರಾಜಕುಮಾರಿಯ ಕೈಯಿಂದಲೇ ಬಹುಮಾನ ಪಡೆದವನಾಗಿದ್ದನು. ಹಾಗೆಯೇ ಅವನು ಇತರ ವೀರರೊಂದಿಗೆ ಕಲೆತು, ನಗರವನ್ನೆಲ್ಲಾ ನೋಡಿ, ವನವಿಹಾರಕ್ಕೆ ಹೊರಟಿದ್ದನು.

ಸುವರ್ಣದೇವಿಯ ಮೇನೆಯೊಂದಿಗೆ ಕೆಲಮಂದಿ ಅಂಗರಕ್ಷಕರು ನಗರದ ಕಡೆಗೆ ಹೊರಟರು. ಶೇಖರನೂ ಅವನ ಅನುಚರರೂ ಕಳ್ಳರು ಓಡಿಹೋಗದಂತೆ, ಕಾವಲಾಗಿದ್ದು, ಇಬ್ಬರು ಅಶ್ವಿಕರನ್ನು ರಾಜಧಾನಿಗೆ ಕಳುಹಿಸಿದರು. ರಾಜನು ಆ ಕಳ್ಳರನ್ನು ಹಿಡಿದು ತರಲು ಸೈನಿಕರಿಗೆ ಆಜ್ಞೆ ಮಾಡಿದನು. ಅವರು ಬಂದು ಕಳ್ಳರನ್ನೆಲ್ಲಾ ಹಗ್ಗಗಳಿಂದ ಕಟ್ಟಿ ಕರೆದುಕೊಂಡು ಹೋದರು. ಶೇಖರನೂ ತನ್ನವರೊಂದಿಗೆ ರಾಜಧಾನಿಗೆ ಹೋದನು.

ಮರುದಿನ ರಾಜನು ಶೇಖರನನ್ನು ತನ್ನ ಬಳಿಗೆ ಆಹ್ವಾನಿಸಿದನು. ಹಾಗೆ ಬಂದ ಶೇಖರನಿಗೆ ರಾಜನು ತನ್ನ ಅಭಿನಂದನೆಗಳನ್ನು ಹೇಳಿ, ಅವನು ಮಾಡಿದ ದೊಡ್ಡ ಸಹಾಯಕ್ಕೆ ಏನು ಬಹುಮಾನ ಬೇಕೆಂದು ಕೇಳಿದನು.

ಅದಕ್ಕೆ ಶೇಖರನು "ಮಹಾರಾಜಾ, ರಾಜಕುಮಾರಿಯೊಂದಿಗೆ ಮಾತಾಡಲು ನನಗೆ ಅನುಮತಿ ಕೊಡಬೇಕು. ನನಗೆ ಬೇಕಾದ ಬಹುಮಾನವನ್ನು ಅವರಿಂದಲೇ ಸ್ವೀಕರಿಸುತ್ತೇನೆ" ಎಂದು ಕೇಳಿಕೊಂಡನು.





ದ್ದೀರಿ. ಕಳ್ಳರಿಂದ ನಿಮ್ಮನ್ನು ಕಾಪಾಡುವುದರಲ್ಲಿ ನಾನು ಪ್ರದರ್ಶನ ಮಾಡಿದ ಧೈರ್ಯ ಸಾಹಸಗಳನ್ನು ಕುರಿತು ನಿಮ್ಮ ಅಭಿಪ್ರಾಯವೇನೆಂದು ಹೇಳುವಿರಾ ? " ಎಂದನು.

"ನಿಮ್ಮ ಧೈರ್ಯ ಸಾಹಸ ಮತ್ತು ಸಮಯ ಸ್ಫೂರ್ತಿ ಪ್ರಶಂಸನೀಯವಾದುದು, ಮೆಚ್ಚತಕ್ಕದ್ದು. ಅದರಲ್ಲಿ ಸಂದೇಹವೇನಿಲ್ಲ. ಇಂತಹ ಪ್ರಶಂಸೆಯು ಬಹುಮಾನವೋ ನಿಮಗೆ ಬೇಕಾದ್ದು ? " ಎಂದಳು ಸುವರ್ಣದೇವಿ.

"ಅದೇನಲ್ಲ. ನಿಮ್ಮ ಅಭಿಮಾನಕ್ಕೆ ಕೃತಜ್ಞನು. ನೀವು ನನ್ನನ್ನು ವಿವಾಹ ಮಾಡಿಕೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ. ಇದು ನಿಮ್ಮ ಶಕ್ತಿಗೆ ಮೀರಿದ ಕೆಲಸವಲ್ಲವೆಂದು ನಂಬುತ್ತೇನೆ. ಏನನ್ನುವಿರಿ ? " ಎಂದನು ಶೇಖರ.

ಈ ಕೋರಿಕೆಯನ್ನು ಕೇಳಿದ ಕೂಡಲೇ ಸುವರ್ಣ ದೇವಿ ಸ್ವಲ್ಪ ಹೊತ್ತು ಮೌನವಾಗಿದ್ದು, ಆಮೇಲಿ ಶೇಖರನನ್ನು ನೋಡಿ, "ಇದು ನನ್ನ ಶಕ್ತಿಗೆ ಮೀರಿದ್ದೋ ಅಥವಾ ಮೀರಿದ್ದಲ್ಲವೋ ಎಂಬುದು ನನಗೆ ಗೊತ್ತಾಗುವುದಿಲ್ಲ. ಅದೇನಾದರೂ ನಿಮ್ಮನ್ನು ವಿವಾಹ ಮಾಡಿಕೊಳ್ಳಲು ನನ್ನ ಅಭ್ಯಂತರವೇನೂ ಇಲ್ಲ. ಆದರೆ ಮೊದಲು ಈ ಸಂಗತಿಯನ್ನು ನಾನು ನನ್ನ ತಂದೆಯೊಂದಿಗೆ ಹೇಳಬೇಕಾಗಿರುತ್ತದೆ" ಎಂದಳು.

ರಾಜಕುಮಾರಿ ಹೇಳಿದ ಮಾತು ಶೇಖರನಿಗೆ ಬಹಳ ಸಂತೋಷವನ್ನುಂಟುಮಾಡಿತು.

ಆ ದಿನ ರಾತ್ರಿ ಅವಳು ತಂದೆಯೊಂದಿಗೆ, "ಅಪ್ಪಾ, ನಿಮ್ಮ ಅನುಮತಿಯಿಂದ ಶೇಖರನು ನನ್ನನ್ನು ನೋಡಲು ಬಂದನು. ಅವನು ದಾರಿ ದೋಚುವ ಕಳ್ಳರು ನನ್ನ ಶರೀರದ ಆಭರಣಗಳನ್ನು ಸೆಳೆದುಕೊಳ್ಳದಂತೆ ನನ್ನನ್ನು ಕಾಪಾಡಿದ್ದು ಮಾತ್ರವಲ್ಲದೆ, ನನ್ನ ಪ್ರಾಣವನ್ನೂ ರಕ್ಷಿಸಿರುತ್ತಾನೆ. ಒಂದು

ರಾಜನು ಅದಕ್ಕೆ ಅನುಮತಿ ನೀಡಿ ಅವನನ್ನು ಮಗಳ ಬಳಿಗೆ ಕಳುಹಿಸಿದನು. ಸುವರ್ಣದೇವಿ ಶೇಖರನಿಗೆ ತನ್ನ ಕೃತಜ್ಞತೆ ಹೇಳಿಕೊಂಡು, "ನಿಮಗೆ ಎಂತಹ ಬಹುಮಾನ ಬೇಕೆನ್ನುವಿರಿ ? " ಎಂದು ಕೇಳಿದಳು.

"ನಾನು ಕೇಳುವುದನ್ನು ತಪ್ಪದೆ ಕೊಡುವೆನೆಂದು ವಾಗ್ದಾನ ಮಾಡಬಲ್ಲಿರಾ ರಾಜಕುಮಾರೀ ? " ಎಂದನು ಶೇಖರ.

"ನನ್ನ ಶಕ್ತಿಗೆ ಒಳಪಟ್ಟದ್ದು ಏನೇ ಆದರೂ ಕೊಡುವೆನೆಂದು ವಾಗ್ದಾನ ಮಾಡುತ್ತೇನೆ. ಅದರಲ್ಲಿ ಯಾವ ರೀತಿಯ ಸಂದೇಹವೂ ಬೇಡ" ಎಂದಳು ಸುವರ್ಣದೇವಿ.

ಅವಳ ಮಾತನ್ನು ಕೇಳಿ ಬಹಳ ಸಂತೋಷಪಟ್ಟ ಶೇಖರನು, "ಯುವರಾಣೀ, ನಾನು ನಿಮಗೆ ಅಪರಿಚಿತನೇನೂ ಅಲ್ಲ. ಈ ಮೊದಲು ನಿಮ್ಮ ಕೈಯಿಂದಲೇ ನನಗೊಂದು ಬಹುಮಾನ ಕೊಟ್ಟಿ

ವೇಳೆ ಆ ನೀಚರು ನನ್ನನ್ನು ಮುಟ್ಟಿ ಎಳೆದಿದ್ದರೆ, ಯಾವಾಗಲೂ ನನ್ನ ಹತ್ತಿರ ಇಟ್ಟುಕೊಂಡಿರುವ ವಿಷವನ್ನು ನುಂಗಿಬಿಡುತ್ತಿದ್ದೆನು. ಈಗ ಶೇಖರನ ಅಪೇಕ್ಷೆ ಏನೆಂದರೆ, ನನ್ನನ್ನು ವಿವಾಹ ಮಾಡಿಕೊಳ್ಳ ಬೇಕೆಂಬುದಾಗಿದೆ. ಇದಕ್ಕೆ ನೀವೇನು ಹೇಳುವಿರಿ ? ಒಪ್ಪಿಕೊಳ್ಳುವುದು ಚೆನ್ನಾಗಿಲ್ಲವೆನ್ನುವಿರಾ ? " ಎಂದಳು.

ರಾಜನು ಸ್ವಲ್ಪ ಆಶ್ಚರ್ಯಕ್ಕೊಳಗಾಗಿ, "ನಿನಗೆ ಆ ಶೇಖರನನ್ನು ವಿವಾಹ ಮಾಡಿಕೊಳ್ಳಲು ಇಷ್ಟ ವಿದೆಯೆ ? ಅದನ್ನು ಸ್ಪಷ್ಟವಾಗಿ ಹೇಳು" ಎಂದು ಪ್ರಶ್ನಿಸಿದನು.

"ಅಪ್ಪಾ, ರಾಜವಂಶದವನನ್ನೇ ಮದುವೆಯಾಗ ಬೇಕೆಂಬ ಹಟವೇನೂ ನನಗಿಲ್ಲ. ಶೇಖರನನ್ನು ಮಾಡಿಕೊಳ್ಳಲು ನನಗೆ ಇಷ್ಟವೇ" ಎಂದಳು ಸುವರ್ಣದೇವಿ.



"ಸರಿ. ಈ ಸಂಗತಿ ಆಲೋಚನೆ ಮಾಡೋಣ" ಎಂದನು ರಾಜ

ಮರುದಿನ ರಾಜನು ಶೇಖರನಿಗೆ ತನ್ನ ಕುಮಾರಿ ಯೊಂದಿಗೆ ಮದುವೆ ಸಾಧ್ಯವಾಗದೆಂದು ಹೇಳಿ ಕಳುಹಿಸಿದನು.

ಅದನ್ನು ಕೇಳಿ ಶೇಖರನು ದಿಗಿಲುಬಿದ್ದು ರಾಜ ಕುಮಾರಿಯ ಹತ್ತಿರ ಹೋಗಿ, ತಾನು ಕೇಳಿದ ಸಂಗತಿಯನ್ನು ಹೇಳಿ, "ನಾನು ನಿಮ್ಮನ್ನು ವಿವಾಹ ವಾಗಲು ಸಾಧ್ಯವಿಲ್ಲದೆ ಹೋದುದರಿಂದ ಮರಣವೇ ನನಗೆ ಗತಿ !" ಎಂದನು.

ರಾಜಕುಮಾರಿ ಅವನಿಗೆ ಸಮಾಧಾನ ಹೇಳುತ್ತ, "ನೀವು ಇಷ್ಟು ನಿರಾಶರಾಗಿ ದಿಗಿಲು ಬೀಳಬಾರದು, ನಾನು ಸಮಯ ಸಂದರ್ಭ ಸಾಧಿಸಿ ನನ್ನ ತಂದೆ ಒಪ್ಪುವ ಹಾಗೆ ಪ್ರಯತ್ನಿಸುತ್ತೇನೆ" ಎಂದಳು.

ಶೇಖರನು ಆ ಮಾತಿನಿಂದ ತೃಪ್ತನಾಗಿ ತನ್ನ ಗ್ರಾಮಕ್ಕೆ ಹೊರಟುಹೋದನು.

ಒಂದು ವರ್ಷ ಕಾಲ ಕಳೆದು ಹೋಯಿತು. ಹಠಾತ್ತಾಗಿ ರಾಜನಿಗೆ ಕಾಯಿಲೆ ಬಂದಿತು. ಹಾಸಿಗೆ ಹಿಡಿದ ರಾಜನು ಆಗಾಗ ಸುವರ್ಣದೇವಿಯೊಂದಿಗೆ "ಮಗಳೇ, ಈ ರೋಗದಿಂದ ನಾನು ಏಳುವೆನೋ ಇಲ್ಲವೋ ಎಂದು ಭಯವಾಗಿದೆ. ನಿನಗೆ ತಕ್ಕ ವರನನ್ನು ನೋಡಿ ಮದುವೆ ಮಾಡಿಬಿಡಬೇಕೆಂದಿ ದ್ದೇನೆ. ಇನ್ನು ತಡಮಾಡಬಾರದು" ಎಂದು ಹೇಳಲು ತೊಡಗಿದನು.

ಸುವರ್ಣದೇವಿ ತಂದೆಯೊಂದಿಗೆ ಶೇಖರನನ್ನು ಕುರಿತು ಹೇಳಬೇಕೆಂದು ಅಂದುಕೊಂಡಳು. ಆದರೆ ತಂದೆ ಅವನ ಸಂಗತಿಯನ್ನೇ ಮರೆತನೇನೋ ? ಈ ಅನುಮಾನದಿಂದ ಅವಳಿಗೆ ಥಕ್ಕನೆ ಹೇಳಲು ಬಾಯಿ ಏಳಲಿಲ್ಲ. ಒಂದು ದಿನ ಸುವರ್ಣದೇವಿ ಧೈರ್ಯ ಮಾಡಿ ತಂದೆಯೊಂದಿಗೆ, ಅವನ ಸಂಗತಿಯನ್ನು ನೆನಪು ಮಾಡಿಬಿಡಬೇಕೆಂದಿರುವಾಗ, ಒಂದು ವಿಪತ್ತು ಸಂಭವಿಸಿತು.



ಸುವರ್ಣದೇವಿಯ ಸಹೋದರನು ಗುರುಕುಲದಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿ ಬರುವಾಗ ಕುದುರೆಯ ಮೇಲಿನಿಂದ ಬಿದ್ದು ತೀರಿಹೋಗಿ ಬಿಟ್ಟನು. ಈ ವಿಷಾದ ವಾರ್ತೆಯನ್ನು ಕೇಳಿದ ಕೂಡಲೇ ದೀರ್ಘ ವ್ಯಾಧಿಯಲ್ಲಿದ್ದ ರಾಜನು ಎದೆ ನಿಂತು ಪ್ರಾಣಬಿಟ್ಟನು.

ಇದರಿಂದಾಗಿ ರಾಜಕುಮಾರಿ ಸುವರ್ಣದೇವಿ ನಿರಾಧಾರಳಾಗಿ ದುಃಖದಿಂದ ಕುಂದಿಹೋದಳು. ಆದರೆ ಸಿಂಹಾಸನಕ್ಕೆ ಇನ್ನು ಅವಳೇ ವಾರಸಳಾಗಿರುವುದರಿಂದ ತನ್ನ ಕರ್ತವ್ಯವನ್ನು ಸ್ಫುರಣೆಗೆ ತಂದುಕೊಂಡು, ರಾಜ್ಯಪಾಲನೆಯಲ್ಲಿ ತಲೆಹಾಕಲೇ ಬೇಕಾಯಿತು. ಅದರಲ್ಲಿ ಅವಳು ಅಶ್ರದ್ಧೆ ತೋರಿಸದೆ, ಪಟ್ಟಾಭಿಷೇಕ ಮಾಡಿಸಿಕೊಂಡು ರಾಜ್ಯಕ್ಕೆ ರಾಣಿಯಾಗಿ ಸಿಂಹಾಸನವೇರಿದಳು.

ಇದೆಲ್ಲಾ ನಡೆದ ಕೆಲವು ದಿನಗಳ ಮೇಲೆ ಅವಳು ಸಮರ್ಥನಾದ ಒಬ್ಬ ಸೇವಕನನ್ನು ಶೇಖರನಿರುವ ಗ್ರಾಮಕ್ಕೆ ಕಳುಹಿಸಿದಳು. ಹಿಂದಿರುಗಿ ಬಂದ ಆ ಸೇವಕನು ಶೇಖರನು ಕೆಲವು ದಿನಗಳ ಕೆಳಗೆ ತನ್ನ ಗ್ರಾಮವನ್ನು ಬಿಟ್ಟು ಎಲ್ಲಿಗೋ ಹೊರಟು ಹೋದನೆಂಬ ಸಮಾಚಾರವನ್ನು ಹೇಳಿದನು. ಶೇಖರನು ಬರುವವರೆಗೂ ಕಾದಿರಬೇಕೆಂದುಕೊಂಡಳು ರಾಣಿ ಸುವರ್ಣದೇವಿ.

ಒಂದು ಸಾರಿ ಅವಳಿಗೆ ರಾಜ್ಯದಲ್ಲಿರುವ ಸಾಮಾನ್ಯ ಪ್ರಜೆಗಳ ಪರಿಸ್ಥಿತಿ ಹೇಗಿರುವುದೆಂದು ಸ್ವತಃ ನೋಡಬೇಕೆಂಬ ಕೋರಿಕೆಯುಂಟಾಯಿತು. ಅದಕ್ಕಾಗಿ ಅವಳು ಮಾರುವೇಷದಲ್ಲಿ ರಾಜ್ಯದ ಸರಿಹದ್ದಿನಲ್ಲಿರುವ ಒಂದು ಗ್ರಾಮಕ್ಕೆ ಹೋದಳು. ಆ ಗ್ರಾಮದ ಶಿವಾಲಯವು ಬಹಳ ಪ್ರಸಿದ್ಧವಾಗಿತ್ತು. ಶಿವರಾತ್ರಿಯ ದಿನ ಮುಖ್ಯವಾಗಿ ಸ್ತ್ರೀಯರು ಹೆಚ್ಚಾಗಿ ಶಿವಾರ್ಚನೆ ಮಾಡಲು ಆ ದೇವಾಲಯಕ್ಕೆ ಬರುತ್ತಾರೆ.

ಕೆಲವು ದಿನಗಳಿಂದ ಆ ಪ್ರಾಂತದಲ್ಲಿರುವ ಗುಡ್ಡಕಾಡುಗಳಲ್ಲಿ ದಾರಿದೋಚುವ ಕಳ್ಳರ ಕಾಟ ವಿಪರೀತವಾಗಿದ್ದಿತು. ಆದರೆ ಆಲಯಕ್ಕೆ ಹೋಗುವ ಭಕ್ತರ ಹತ್ತಿರ ಬೆಲೆಬಾಳುವ ವಸ್ತುಗಳೇನೂ ಇರುವುದಿಲ್ಲವಾದುದರಿಂದ ಅಂಥವರು ಮಾತ್ರ ನಿರ್ಭಯದಿಂದ ದೇವಾಲಯಕ್ಕೆ ಹೋಗಿಬರುತ್ತಿರುವರು.

ಸುವರ್ಣದೇವಿ ಹಾಗೆಯೇ ಅವರೊಂದಿಗೆ ಕೂಡಿ ಸ್ವಲ್ಪದೂರ ಪ್ರಯಾಣ ಮಾಡಿದ ಮೇಲೆ ಒಂದು ಗುಡ್ಡದ ತಿರುವಿನಲ್ಲಿ ಕೆಲವು ಮಂದಿ ಕಳ್ಳರು ಅವರ ಮೇಲೆ ಬಿದ್ದರು.

ಆ ಕಳ್ಳರು ಸುವರ್ಣದೇವಿಗೆ ಆಯುಧಗಳನ್ನು ತೋರಿಸಿ, ಹೆದರಿಸಿ, ಒಂದು ಕುದುರೇ ಗಾಡಿಯಲ್ಲಿ ಅವಳನ್ನು ಏರಿಸಿ, ಗುಡ್ಡದ ಮೂಲೆಯಲ್ಲಿದ್ದೊಂದು ಮನೆಗೆ ಕರೆದುಕೊಂಡು ಹೋಗಿ "ಏನೂ ಹೆದರಬೇಕಾಗಿಲ್ಲ. ನಿನ್ನ ಒಳಿತಿಗಾಗಿಯೇ ಇಲ್ಲಿಗೆ ಕರೆದು ತಂದಿದ್ದೇವೆ" ಎಂದರು.

ಒಂದು ಗಂಟೆ ಹೊತ್ತು ಕಳೆದ ಮೇಲೆ ಕಳ್ಳರ ನಾಯಕನು ಅಲ್ಲಿಗೆ ಬಂದನು. ಅವನು ಸುವರ್ಣ ದೇವಿಯನ್ನು ಪರೀಕ್ಷಿಸುವಂತೆ ನೋಡಿ, "ನಾನು ಒಬ್ಬಳು ಸುಂದರಿಯನ್ನು ಮದುವೆಯಾಗಬೇಕೆಂದಿದ್ದೆನು. ನನ್ನ ಅನುಚರರು ಒಳ್ಳೆಯ ಸುಂದರಿಯನ್ನೇ ಆರಿಸಿ ತಂದಿದ್ದಾರೆ" ಎಂದು ಹೇಳಿ ಸ್ವಲ್ಪ ತಡೆದು, "ನಾನೆಂದೋ ಒಂದು ಸಾರಿ ನಿನ್ನನ್ನು ನೋಡಿದ ಹಾಗಿದೆ!" ಎಂದನು ಆಶ್ಚರ್ಯಪಡುತ್ತ.

"ನೀನು ಶೇಖರನಲ್ಲವೆ?" ಎಂದು ಸುವರ್ಣ ದೇವಿ ಪ್ರಶ್ನಿಸಿದಳು.

ಕಳ್ಳರ ನಾಯಕನು ಬೆಚ್ಚಿಬಿದ್ದು, "ನಿನಗೆ ನನ್ನ ಹಿಂದಿನ ಹೆಸರು ಹೇಗೆ ತಿಳಿಯಿತು? ಈಗ ನನ್ನನ್ನು ಎಲ್ಲರೂ ಭೀಮನಾಯಕನೆಂದು ಕರೆಯುತ್ತಾರೆ" ಎಂದನು.

ಸುವರ್ಣದೇವಿ ಮುಗುಳು ನಗುತ್ತ, "ನೀನು ನನ್ನನ್ನು ಗುರುತಿಸಲಿಲ್ಲವೆಂದಾಯಿತು. ನಾನು ರಾಜ ಕುಮಾರಿಯಾಗಿದ್ದ ಸುವರ್ಣದೇವಿ. ನಿನ್ನನ್ನು ವಿವಾಹ ಮಾಡಿಕೊಳ್ಳಬೇಕೆಂದು ಕೆಲವು ದಿನಗಳ ಹಿಂದೆ ನಿನ್ನ ಗ್ರಾಮಕ್ಕೆ ಸೇವಕರನ್ನು ಕಳುಹಿಸಿದ್ದೆ. ನೀನು ಗ್ರಾಮದಲ್ಲಿಲ್ಲವೆಂದು ತಿಳಿಯಿತು" ಎಂದಳು.

"ಹೌದೇನು? ಬಹಳ ಸಂತೋಷದ ಸಂಗತಿ ಹೇಳಿದಿ! ನೀನು ನಿಜಕ್ಕೂ ನನ್ನನ್ನು ವಿವಾಹ ಮಾಡಿಕೊಳ್ಳುವಿ ಎಂದು ನನಗೆ ತೋರಲಿಲ್ಲ. ನನ್ನ ಅನುಚರರಿಗೆ ಒಬ್ಬಳು ಸುಂದರಿಯಾದ ಯುವತಿಯನ್ನು ನಾನು ಮದುವೆಯಾಗಲು ಹಿಡಿದುಕೊಂಡು ಬರುವಂತೆ ಆಜ್ಞೆ ಮಾಡಿದ್ದೆನು. ಅವರು ನಿನ್ನನ್ನು ತಂದರು. ನಾವು ಒಬ್ಬೊರನ್ನೊಬ್ಬರು ಹೀಗೆ ನೋಡುವಂತಾದುದು ವಿಧಿವಿಲಾಸವೇ ಸರಿ!" ಎಂದನು ಶೇಖರ.

"ಹೌದು. ಇದು ವಿಧಿವಿಲಾಸವೇ ನಿಜ!" ಎಂದಳು ಸುವರ್ಣದೇವಿ.



ಅವಳ ಮಾತು ಕೇಳಿ ಶೇಖರನಿಗೆ ಬಹಳ ಸಂತೋಷವಾಯಿತು. ಸುವರ್ಣದೇವಿ ತನ್ನನ್ನು ತಾನಾಗಿಯೇ ಮೆಚ್ಚಿ ವಿವಾಹ ಮಾಡಿಕೊಳ್ಳುವೆನೆಂದುದನ್ನು ಕೇಳಿ ಅವನು ಅವಳಿಗೆ ಕಾವಲುಗಾರರನ್ನು ನಿಯಮಿಸದೆ ಬಿಟ್ಟನು. ಅವಳು ಆ ಮನೆಯ ಮುಂದಿರುವ ಆವರಣದಲ್ಲಿ ಸ್ವೇಚ್ಛೆಯಾಗಿ ತಿರುಗತೊಡಗಿದಳು.

ತಮ್ಮ ರಾಣಿ ಮಾರುವೇಷದಲ್ಲಿ ಹೊರಟಾಗ, ಅವಳಿಗೆ ರಕ್ಷಣೆಯಾಗಿ ಕೆಲವು ಮಂದಿ ಸೈನಿಕರು ಮಾರುವೇಷಗಳಲ್ಲಿ ಹೊರಟಿದ್ದರು. ಅವರು ಅವಳಿರುವ ಸ್ಥಳವನ್ನು ತಿಳಿದುಕೊಂಡು ಬರುತ್ತಿರಲು, ಸುವರ್ಣದೇವಿ ಸಂಜ್ಞೆಗಳಿಂದ ಅವರಿಗೆ ಎಚ್ಚರಿಕೆ ಕೊಟ್ಟಳು.

ಅನಂತರ ಮಧ್ಯರಾತ್ರಿಯ ಹೊತ್ತಿನಲ್ಲಿ ರಾಜಧಾನಿಯಿಂದ ಬಂದ ಸೈನಿಕರು ಶೇಖರನ ಸ್ಥಾವರವನ್ನು ಮುತ್ತಿ, ಅವನನ್ನೂ ಅವನ ಅನುಚರರನ್ನೂ

ಹಿಡಿದು ಬಂಧಿಸಿದರು. ರಾಜಭವನಕ್ಕೆ ಹಿಂದಿರುಗಿದ ಕೂಡಲೇ, ದಾರಿದೋಚುವ ಕಳ್ಳರೆಲ್ಲರನ್ನೂ ವಿಚಾರಣೆ ನಡೆಸಿ, ಅಲ್ಲಿಯ ಶಾಸನದಂತೆ ಎಲ್ಲರಿಗೂ ಗಲ್ಲಿನ ಶಿಕ್ಷೆ ವಿಧಿಸಿದಳು ರಾಣಿ ಸುವರ್ಣದೇವಿ.

ಬೇತಾಳವು ಈ ರೀತಿ ಕಥೆಯನ್ನು ಮುಗಿಸಿ, "ರಾಜಾ! ರಾಜಕುಮಾರಿ ಸುವರ್ಣದೇವಿಯ ಪ್ರವರ್ತನೆ ಹೇಯವಾದುದಲ್ಲವೇನು? ಅವಳದು ವಿಶ್ವಾಸಘಾತವಲ್ಲವೇನು? ಅವಳು ಶೇಖರನನ್ನು ವಿವಾಹವಾಗುವೆನೆಂದು ವಾಗ್ದಾನ ಮಾಡಿದ್ದಾಳೆ. ಅವನನ್ನು ಹುಡುಕಿ ತರಲು ಸೇವಕನನ್ನೂ ಕಳುಹಿಸಿದ್ದಾಳೆ. ಆಮೇಲೆ ಶೇಖರನ ಅನುಚರರು ಶಿವಾಲಯದ ಯಾತ್ರಿಕರೊಂದಿಗಿದ್ದವಳನ್ನು ಹಿಡಿದು ತರಿಸಿದಾಗ ಅವನಿಗೆ ದ್ರೋಹ ಮಾಡಿದಳು. ಇದು ಕೊಟ್ಟ ಮಾತು ತಪ್ಪಿದಂತಾಯಿತೋ ಇಲ್ಲವೋ? ಶೇಖರನು ತಾವು ಹೀಗೆ ಸಂಧಿಸಿಕೊಂಡದ್ದು ವಿಧಿವಿಲಾಸವೆಂದಾಗ ಅವಳೂ ಹೌದೆಂದಿದ್ದಾಳೆ. ಅದನ್ನು ಸುಳ್ಳು ಮಾಡಿದಳೇಕೆ? ಈ ಸಂದೇಹಕ್ಕೆ ತಕ್ಕ ಉತ್ತರ ತಿಳಿದೂ ಹೇಳದಿದ್ದರೆ ನಿನ್ನ ತಲೆ ಚೂರು ಚೂರಾಗಿ ಒಡೆದು ಸಾಯುವಿ!" ಎಂದು ಹೇಳಿ ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಶೇಖರನು ತನ್ನನ್ನು ಕಳ್ಳರ ಕೈಯಿಂದ ಕಾಪಾಡಿದನೆಂಬ ಕೃತಜ್ಞತೆ ಸುವರ್ಣದೇವಿಗೆ ಇದ್ದಿತು. ಅವನು ಅವಳನ್ನು ಮದುವೆಯಾಗಲು ಕೇಳಿಕೊಂಡಾಗ ಅದಕ್ಕೆ ಅವಳು ಒಪ್ಪಿದ್ದಾಳೆ. ಅವನು ಒಳ್ಳೆಯ ಧೈರ್ಯ ಸಾಹಸವುಳ್ಳವನೂ ನೀತಿವಂತನೂ ಎಂದು ತಿಳಿದಿದ್ದಳು. ಈಗ ಅವನು ಅಸಹಾಯಕರನ್ನೂ, ನಿರಾಯುಧರಾದ ಪ್ರಯಾಣಿಕರನ್ನೂ ದೋಚಿಕೊಳ್ಳುವ ಕಳ್ಳರ ನಾಯಕನಾದನು. ಸುವರ್ಣದೇವಿ ಮದುವೆಯಾಗುವೆನೆಂದು ವಾಗ್ದಾನ ಮಾಡಿದ್ದು ಈ ಕಳ್ಳರ ನಾಯಕನಿಗಲ್ಲ. ವಿಧಿವಿಲಾಸವೆಂದರೆ, ಶೇಖರನು ತಾನು ಇದಿರು ನೋಡದಂತೆ ಹೀಗೆ ಪರಸ್ಪರ ಸಂಧಿಸಿದ್ದು ಅವನ ದೃಷ್ಟಿಯಲ್ಲಿ ವಿಧಿವಿಲಾಸವಾದರೆ, ಅವಳು ಅವನನ್ನು ಕಳ್ಳರ ನಾಯಕನೆಂದು ತಿಳಿಯದಿರುತ್ತಿದ್ದರೆ ಅವನನ್ನು ವಿವಾಹ ಮಾಡಿಕೊಂಡು ಜೀವಿತಾಂತ್ಯದವರೆಗೂ ಸಂಕಟಪಡುವುದು ತಪ್ಪುವಂತಾದುದು ಅವಳ ದೃಷ್ಟಿಯಲ್ಲಿ ವಿಧಿವಿಲಾಸವೆನಿಸಿದೆ. ರಾಣಿಯಾದ ಅವಳು ಕಳ್ಳರನ್ನು ತಕ್ಕ ರೀತಿಯಲ್ಲಿ ದಂಡಿಸುವುದೇ ಸರಿಯೆಂದುಕೊಂಡಳು. ಈ ವಾಗ್ದಾನ ಭಂಗವು ಒಳ್ಳೆಯತನದ ದ್ರೋಹವೇ ಹೊರತು ಕೆಟ್ಟ ದ್ರೋಹವಲ್ಲ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡಿತು.



ನಮ್ಮ ದೇವಾಲಯಗಳು :

# ಗಯಾ, ಬುದ್ಧಗಯಾ

ಹತ್ತು ಸಾವಿರ ಸಂವತ್ಸರಗಳ ಹಿಂದೆ ಗಯಾಸುರನೆಂಬ ರಾಕ್ಷಸನು ವಿಷ್ಣುವನ್ನು ಧ್ಯಾನಿಸುತ್ತ ತಪಸ್ಸು ಮಾಡಿದನು. ಅಪಾರ ಶಕ್ತಿ ಸಾಧಿಸಲಿಕ್ಕಾಗಿ ಅವನು ಪ್ರಾರಂಭಿಸಿದ ತಪಸ್ಸು ಅನೇಕ ಸಂವತ್ಸರಗಳವರೆಗೆ ತಡೆಯಿಲ್ಲದೆ ನಿರಂತರವಾಗಿ ಸಾಗಿಕೊಂಡೇ ಇದ್ದಿತು.

ಗಯಾಸುರನ ಉಗ್ರವಾದ ತಪಸ್ಸನ್ನು ನೋಡಿದ ದೇವತೆಗಳು ಆಶ್ಚರ್ಯಪಡುತ್ತ ಹೆದರಿದರು. ರಾಕ್ಷಸನಾದ ಅವನ ತಪಸ್ಸು ಫಲಿಸಿ, ಅವನಿಗೆ ಅಪಾರ ಶಕ್ತಿ ಸಿದ್ಧಿಸಿಬಿಟ್ಟರೆ, ಅವನು ಸಾಧು ಸಜ್ಜನರನ್ನು ಹಿಂಸಿಸದೆ ಬಿಡಲಾರನೆಂದು ಊಹಿಸಿ, ಅವನ ತಪಸ್ಸನ್ನು ಕೆಡಿಸುವ ಯೋಜನೆಗೆ ತೊಡಗಿದರು.





ದೇವತೆಗಳಲ್ಲಿ ಒಬ್ಬನು ಗಯಾಸುರನ ಸಮೀಪ ಬಂದು, "ನನಗೆ ಬಹಳ ಆಯಾಸವಾಗಿದೆ. ನಿನ್ನ ಭುಜದ ಮೇಲೆ ವಿಶ್ರಮಿಸಿಕೊಳ್ಳುತ್ತೇನೆ" ಎಂದನು. ಅದಕ್ಕೆ ಸಂತೋಷದಿಂದ ಒಪ್ಪಿದನು ಗಯಾಸುರ. ಆ ದೇವನು ಅವನ ಭುಜದ ಮೇಲೆ ಹತ್ತಿ ಕುಳಿತನು.



ಆಮೇಲೆ ಉಳಿದ ದೇವತೆಗಳೆಲ್ಲರೂ, ಮೊದಲನೇ ದೇವನ ಹಾಗೆಯೇ ಗಯಾಸುರನನ್ನು ಸಮೀಪಿಸಿ ತಮ್ಮ ಅಪೇಕ್ಷೆಗಳನ್ನು ಹೇಳಿದರು. ಗಯಾಸುರನು ಸಂತೋಷದಿಂದ ತನ್ನ ದೇಹವನ್ನು ಬೆಳೆಸಿ ದೇವತೆಗಳೆಲ್ಲರಿಗೂ ಭುಜಗಳ ಮೇಲೆಯೂ, ಕೈಗಳ ಮೇಲೆಯೂ, ಮಡಿಲಲ್ಲಿಯೂ ಸ್ಥಾನ ಕಲ್ಪಿಸಿಕೊಟ್ಟನು. ಸ್ವಲ್ಪ ಹೊತ್ತಿಗೆ ದೇವತೆಗಳು ಅವನನ್ನು ಕ್ರಮವಾಗಿ ನೆಲಕ್ಕೆ ಒತ್ತಲು ಪ್ರಾರಂಭಿಸಿದರು.

ದೇವತೆಗಳ ಉದ್ದೇಶವೇನೆಂದು ಗಯಾಸುರನಿಗೆ ಗೊತ್ತಾಯಿತು. ವಿಷ್ಣುವಿನ ಮೇಲಿರುವ ಅಚಂಚಲವಾದ ಭಕ್ತಿಯ ಕಾರಣದಿಂದ, ಅವನು ಅವರೆಲ್ಲರನ್ನೂ ವಿನಯದಿಂದ ನೋಡುತ್ತ "ದೇವತೆಗಳಿರಾ! ನಿಮ್ಮ ಅಭಿಪ್ರಾಯದ ಪ್ರಕಾರ ನಾನು ಭೂಮಿಯೊಳಗೆ ಹೋಗಿಬಿಡುತ್ತೇನೆ. ಆದರೆ ನೀವು ನನ್ನನ್ನು ಎಂದಿಗೂ ಬಿಡದೆ ಇರುತ್ತೇವೆಂದು ಮಾತು ಕೊಡಬೇಕು" ಎಂದನು. ದೇವತೆಗಳು ಹಾಗೆಯೇ ಆಗಲಿ ಎಂದರು. ಗಯಾಸುರನು ಪೂರ್ತಿಯಾಗಿ ಭೂಮಿಯೊಳಗೆ ಹೂತುಹೋದನು.





ಆ ಸ್ಥಳದಲ್ಲಿಯೇ ಬ್ರಹ್ಮದೇವನು ಯಜ್ಞ ಮಾಡಿದನು. ದೇವತೆಗಳೊಂದಿಗೆ ಗಯಾಸುರನು ಅಲ್ಲಿ ಭೂಗತನಾಗಿದ್ದುದರಿಂದ ಅವನ ಭಕ್ತಿಗೂ, ವಿನಯಕ್ಕೂ ಮುಗ್ಧನಾದ ವಿಷ್ಣು, ಅಲ್ಲಿ ಪ್ರತ್ಯಕ್ಷನಾಗಿ ಗಯಾಸುರನ ಆತ್ಮವನ್ನೂ, ಆ ಸ್ಥಳವನ್ನೂ ಆಶೀರ್ವಾದ ಮಾಡಿದನು.

ವಿಷ್ಣು ಪ್ರತ್ಯಕ್ಷನಾದ ಆ ಸ್ಥಳದಲ್ಲಿ ವಿಷ್ಣುವಿನ ಪಾದಪದ್ಮಗಳ ಗುರುತುಗಳು ಏರ್ಪಟ್ಟುವು. ಪ್ರಸ್ತುತ ಇಲ್ಲಿ ಬೆಳಗುವ ವಿಷ್ಣುಪಾದ ಮಂದಿರವನ್ನು ಇಂದೋರನ್ನು ಪರಿಪಾಲಿಸಿದ ರಾಣಿ ಅಹಲ್ಯಾಬಾಯಿ ನಿರ್ಮಿಸಿದಳು.





ಗಯಾಕ್ಷೇತ್ರವೆಂದು ಪ್ರಸಿದ್ಧವಾದ ಈ ಕ್ಷೇತ್ರದಲ್ಲಿ ಪಿತೃ ಕಾರ್ಯಗಳನ್ನು ನೆರವೇರಿಸುತ್ತಾರೆ. ಸುತ್ತುಮುತ್ತಲಿನಿಂದ ದಿನಾ ಅಸಂಖ್ಯಾಕ ಜನರು ಬಂದು ಪಿತೃ ದೇವತೆಗಳ ಪ್ರೀತಿಗಾಗಿ ತರ್ಪಣಾದಿ ಕೃತ್ಯಗಳನ್ನು ಆಚರಿಸುತ್ತಾರೆ.

ದಿವ್ಯಾತ್ಮಗಳ ಮಿಲನವಾದ ಫಲ್ಗು ನದಿ ಈ ಪ್ರದೇಶದಲ್ಲಿ ಅದೃಶ್ಯವಾದ ಅಂತರ್ವಾಹಿನಿಯಾಗಿ ಪ್ರವಹಿಸುತ್ತದೆ. ಭಕ್ತರು ನೆಲವನ್ನು ಅಗೆದರೆ ಕೂಡಲೇ ನೀರು ಒಸರುತ್ತದೆ. ಈ ಜಲವನ್ನು ಅತ್ಯಂತ ಮಹಿಮಾನ್ವಿತವೆಂದು ಭಕ್ತರು ವಿಶ್ವಸಿಸುತ್ತಾರೆ.





ಗೌತಮ ಬುದ್ಧನು ಆಲದ ಮರದ ಕೆಳಗೆ ಧ್ಯಾನಮಗ್ನನಾಗಿ ಜ್ಞಾನಸಿದ್ಧಿ ಪಡೆದ ಬುದ್ಧ ಗಯಾ ಕ್ಷೇತ್ರವು, ಗಯೆಗೆ ಹದಿನಾಲ್ಕು ಕಿಲೋ ಮೀಟರ್ ದೂರದಲ್ಲಿದೆ. ಬುದ್ಧನಿಗೆ ನೆರಳು ಕೊಟ್ಟ ವಟವೃಕ್ಷದಿಂದ ಹುಟ್ಟಿದ ನೂರು ಸಂವತ್ಸರಗಳ ಹಿಂದಿನ ವಟವೃಕ್ಷವು ಈಗಲೂ ಇಲ್ಲಿ ನಿಂತಿದೆ.

ಇಲ್ಲಿ ಮಹಾದೇವಿಯ ಆಲಯವು ವಿಲಕ್ಷಣ ವಾದ ಬೌದ್ಧ ಶಿಲ್ಪ ಕಳೆಗೆ ಉದಾಹರಣೆಯಾಗಿ ಬೆಳಗಿಕೊಂಡಿದೆ. ಈ ಆಲಯದ ಮುಖದ್ವಾರವು ಅದ್ಭುತವಾದ ಶಿಲ್ಪಗಳಿಂದ ರಾಜಿಸುತ್ತದೆ. ಈ ಗುಡಿಯಲ್ಲಿ ಬಂಗಾರದ ರೇಕುಗಳಿಂದ ಹೊದುಗಿಸಲ್ಪಟ್ಟ ಬುದ್ಧನ ವಿಗ್ರಹವಿದೆ. ಈ ದೇವಾಲಯವು ಅನೇಕ ಶತಮಾನಗಳಿಂದ ದೇಶ ವಿದೇಶಗಳ ಭಕ್ತರನ್ನು ಆಕರ್ಷಿಸುತ್ತದೆ.






ಜ್ಞಾನಸಿದ್ಧಿಯ ಅನಂತರ ಬುದ್ಧನು ಎದ್ದು, ತುಂಬಿದ ಕೃತಜ್ಞತೆಯಿಂದ ದೂರದ ತೀರಗಳ ಕಡೆಗೆ ನೋಡುತ್ತಾ ನಿಂತ, ಅನಿಮೇಪಲೋಚನ ಚೈತ್ಯ ಮಹಾಬೋಧಿ ಎಂಬ ಪವಿತ್ರ ಸ್ಥಳವು ಈ ಆಲಯದ ಸಮೀಪದಲ್ಲಿಯೇ ಇದೆ.



# ನಿಜವಾದ ಕಳ್ಳ

ಶಿವಪುರವೆಂಬ ದೊಡ್ಡದೊಂದು ಗ್ರಾಮದಲ್ಲಿ ಪ್ರಯಾಣಿಕರಿಗೆ ಒಳ್ಳೆಯ ಸೌಕರ್ಯವಿರುವಂತಹ ಛತ್ರವಿದ್ದಿತು.

ಒಂದು ದಿನ ಬೆಳಗ್ಗಿನ ಹೊತ್ತಿನಲ್ಲಿ ಇಬ್ಬರು ದಾರಿಹೋಕರು ಆ ಛತ್ರಕ್ಕೆ ಬಂದು ಒಂದು ಹಣದ ಚೀಲದ ವಿಷಯದಲ್ಲಿ ವಾದ ಮಾಡಿಕೊಳ್ಳತೊಡಗಿದರು. ಅದು ತನ್ನ ಚೀಲವೆಂದು ಒಬ್ಬನೆಂದರೆ, ಅಲ್ಲ ತನ್ನದೇ ಎಂದು ಇನ್ನೊಬ್ಬನು ಹೇಳುತ್ತಿದ್ದನು. ಚೀಲದಲ್ಲಿ ನೂರ ಹತ್ತು ರೂಪಾಯಿಗಳಿವೆಯಂತೆ. ಅದೇ ಅವರಿಬ್ಬರೊಳಗಿನ ಜಗಳ. ಛತ್ರದಲ್ಲಿ ತಂಗಿದವರೆಲ್ಲಾ ಅಲ್ಲಿ ಸೇರಿದರು. ಯಾರಿಂದಲೂ ನ್ಯಾಯ ತೀರ್ಮಾನಿಸಲು ಸಾಧ್ಯವಾಗಲಿಲ್ಲ.

ಅದನ್ನು ನೋಡಿದ ಗ್ರಾಮದ ಕಾವಲುಗಾರರು "ಇದೆಲ್ಲಾ ಇಲ್ಲಿ ಸರಿಹೋಗದು. ನಡೆಯಿರಿ" ಎಂದು ಅವರಿಬ್ಬರನ್ನೂ ಗ್ರಾಮಾಧಿಕಾರಿಯ ಬಳಿಗೆ ಎಳೆದುಕೊಂಡು ಹೋದರು.

ಗ್ರಾಮಾಧಿಕಾರಿ ನಿಜವನ್ನು ಹೇಳಿಬಿಡುವಂತೆ ಇಬ್ಬರಿಗೂ ನಯಭಯಗಳಿಂದ ಎಷ್ಟು ಹೇಳಿದರೂ, ಹಣದ ಚೀಲ ನನ್ನದೆಂದು ಇಬ್ಬರೂ ಹೇಳುವುದರ ಹೊರತು ನಿಜವೇನೆಂಬುದನ್ನು ಹೇಳಲಿಲ್ಲ. ಅದರಿಂದ ಬೇಸತ್ತು ಹೋದ ಗ್ರಾಮಾಧಿಕಾರಿ, "ಕಾರಾಗೃಹವೇ ನಿಜವನ್ನು ಬೆಳಕಿಗೆ ತರುತ್ತೆ" ಎಂದು ಹೇಳಿ ಅವರನ್ನು ಕತ್ತಲೆ ಕೋಣೆಯಲ್ಲಿ ಹಾಕುವಂತೆ ಕಾವಲಿಗರಿಗೆ ಆಜ್ಞೆ ಮಾಡಿದನು.

ಅವರಿಬ್ಬರಲ್ಲಿ ಒಬ್ಬನು ಮಾತ್ರ ಕಳ್ಳನೆಂದು ಗೊತ್ತೇ ಇದೆ. ಆದರೆ ಇಂಥವನೆಂಬುದಕ್ಕೆ ನಿಜವಾದ ಆಧಾರ ಸಿಕ್ಕದೆ ಯಾರೆಂದು ಹೇಳಲು ಸಾಧ್ಯವಿಲ್ಲವಷ್ಟೆ? ಗ್ರಾಮಾಧಿಕಾರಿ ಯೋಚನೆಗೆ ಬಿದ್ದನು.

ಈ ಮೊದಲು ಇಂತಹ ಸಮಸ್ಯೆ ಇದಿರಾದಾಗ ರಾಜನೂ ಮಂತ್ರಿಯೂ ಏನೋ ಒಂದು ಉಪಾಯದಿಂದ ಸುಲಭದಲ್ಲಿ ಸಮಸ್ಯೆಯನ್ನು ಬಗೆಹರಿಸಿಬಿಡುತ್ತಿದ್ದುದನ್ನು ತಿಳಿದಿದ್ದನು. ತಾನು ಕೂಡಾ ಅದೇ ರೀತಿಯಲ್ಲಿ ನಿಜವಾದ ಕಳ್ಳನನ್ನು ಹಿಡಿಯಲು ತಕ್ಕ ಉಪಾಯಕ್ಕಾಗಿ ಹುಡುಕಲು ತೊಡಗಿದನು ಗ್ರಾಮಾಧಿಕಾರಿ. ಅವನಿಗೆ ರಾತ್ರಿಯಲ್ಲಿ ಸರಿಯಾಗಿ ನಿದ್ದೆಯೂ ಬರಲಿಲ್ಲ. ಅದರದೇ ಯೋಚನೆ.

ಎರಡು ಮೂರು ದಿನಗಳು ಕಳೆದುವು. ಗ್ರಾಮಾಧಿಕಾರಿ ಬಹಳ ಸೂಕ್ಷ್ಮವಾದ ಮನಸ್ತತ್ವವುಳ್ಳವನಾಗಿ

**ಡಿ. ವೆಂಕಟರಮಣ**



ದ್ದನು. ಕತ್ತಲೆ ಕೋಣೆಯಲ್ಲಿ ಬಂಧಿಸಲ್ಪಟ್ಟ ಇಬ್ಬರಲ್ಲಿ ಒಬ್ಬನು ಮಾತ್ರ ಅಪರಾಧಿಯಾದುದರಿಂದ, ಅವನೊಂದಿಗೆ ನಿರಪರಾಧಿ ಕೂಡಾ ಕಷ್ಟಕ್ಕೆ ಗುರಿಯಾಗುವಂತಾಯಿತೆಂದು, ನ್ಯಾಯ ದೇವತೆಯ ಮುಂದೆ ತಾನೂ ಅಪರಾಧಿಯಾಗುವೆನೆಂದು ಅವನು ನೊಂದುಕೊಳ್ಳುತ್ತಿದ್ದನು.

ಆ ಸಮಯದಲ್ಲಿ ಅವನಿಗೆ ಒಂದು ಸುದ್ದಿ ಗೊತ್ತಾಯಿತು. ಅದೇನೆಂದರೆ, ರಾಜಧಾನಿಯಿಂದ ಒಬ್ಬನು ಉನ್ನತಾಧಿಕಾರಿ ಗ್ರಾಮಗಳ ಪರಿಸ್ಥಿತಿಯನ್ನು ತಿಳಿದುಕೊಳ್ಳುತ್ತಾ, ಶಿವಪುರದ ಕಡೆಗೇ ಬರುತ್ತಿದ್ದಾನಂತೆ.

ಗ್ರಾಮಾಧಿಕಾರಿ ಆ ಅಧಿಕಾರಿಯನ್ನು ಗ್ರಾಮದ ಮೇರೆಯಲ್ಲಿಯೇ ಇದಿರುಗೊಂಡು ಸ್ವಾಗತಿಸಿ, ಗ್ರಾಮದ ವಿವರಗಳನ್ನು ತಿಳಿಯಪಡಿಸಿದನು. ಆಮೇಲೆ ತನಗೆ ಇದಿರಾದ ಸಮಸ್ಯೆಯನ್ನು ಅವನೊಂದಿಗೆ ಹೇಳಿ, "ಅವರಿಬ್ಬರಲ್ಲಿ ಒಬ್ಬನು ಮಾತ್ರವೇ ಕಳ್ಳ. ಎರಡನೆಯವನೇ ಆ ಹಣದ ಚೀಲದ ಹಕ್ಕಿನವನು. ನನಗೆ ಯಾವನು ಕಳ್ಳನೆಂದು ಕಂಡುಹಿಡಿಯಲಾಗದೆ, ಪಾಪ, ನಿರಪರಾಧಿಯನ್ನು ಕೂಡಾ ಕತ್ತಲೆ ಕೋಣೆಗೆ ಸೇರಿಸಬೇಕಾಯಿತು. ಇದೊಂದು ದೊಡ್ಡ ಸಂಕಟವಾಗಿದೆ" ಎಂದು ಮನನೊಂದು ಹೇಳಿದನು.

ಅದನ್ನು ಕೇಳಿ ಉನ್ನತಾಧಿಕಾರಿ ಸ್ವಲ್ಪಹೊತ್ತು ಆಲೋಚಿಸಿ, "ನಿಮ್ಮ ಪದವಿಯಲ್ಲಿ ಇಂತಹ ಧರ್ಮಸಂಕಟವು ಸಹಜವೇ. ಅಪರಾಧಿಗಳನ್ನು ಹಿಡಿಯುವ ಪ್ರಯತ್ನದಲ್ಲಿ ನಿರಪರಾಧಿಗಳಿಗೂ ಕಷ್ಟಕೊಡಬೇಕಾಗಿ ಬರುತ್ತದೆ. ಅದು ಅವರ ಪೂರ್ವ ಜನ್ಮದ ಕರ್ಮ ಅಥವಾ ಗ್ರಹಚಾರ. ಅದಕ್ಕಾಗಿ ನೀವು ಇಷ್ಟೊಂದು ಮನಸ್ಸು ಕರಗಬಾರದು" ಎಂದನು.

ಆಮೇಲೆ ಆ ಉನ್ನತಾಧಿಕಾರಿ ಹಣದ ಚೀಲವನ್ನು ನೋಡಿ ಆಶ್ಚರ್ಯಪಡುತ್ತ, "ನಿಮ್ಮ ಸಮಸ್ಯೆಗೆ ಪರಿಷ್ಕಾರ ಸಿಕ್ಕಿತು! ಅವರಿಬ್ಬರೂ ಹಸಿ ಹಸೀ ಕಳ್ಳರೇ. ಈ ಹಣದ ಚೀಲ ನನ್ನದೇ. ಎರಡು ದಿನಗಳ ಹಿಂದೆ ಯಾರೋ ಇದನ್ನು ಉಪಾಯವಾಗಿ ನನ್ನಿಂದ ಜಾರಿಸಿಕೊಂಡು ಹೋಗಿದ್ದಾರೆ. ನೀವು ಕತ್ತಲೆ ಕೋಣೆಯಲ್ಲಿ ಹಾಕಿದವರು ಅವರೇ ಆಗಿರಬೇಕು. ಜತೆ ಕಳ್ಳರು! ಅದಕ್ಕೇ ನನ್ನದು, ತನ್ನದು ಎಂದು ಜಗಳಕ್ಕೆ ಬಿದ್ದಿದ್ದಾರೆ" ಎಂದನು.

ಉನ್ನತಾಧಿಕಾರಿಯ ಮಾತನ್ನು ಕೇಳಿ ಗ್ರಾಮಾಧಿಕಾರಿ ಬಹಳ ಆಶ್ಚರ್ಯಪಡುತ್ತ, "ಅಯ್ಯಾ, ಇಲ್ಲಿ ಒಂದು ಸಂಗತಿಯನ್ನು ತಾವು ತಿಳಿಯಬೇಕು. ಹಣದ ಚೀಲವನ್ನು ನೋಡಿದ ಕೂಡಲೇ ನಿಮ್ಮದೇ ಎಂದಿರಿ. ಚೆನ್ನಾಗಿದೆ. ಅದಕ್ಕೆ ಬೇರೆ ಸಾಕ್ಷ್ಯಾಧಾರ ಬೇಕಲ್ಲವೆ? ಅಂತಹುದೇನೂ ಇಲ್ಲದೆ ನಾನು ಕಣ್ಣು ಮುಚ್ಚಿ ಹಣದ ಚೀಲವನ್ನು ನಿಮಗೆ ಕೊಟ್ಟುಬಿಡುವುದೆಂದರೆ ಮೂರ್ಖತನವಾದೀತಷ್ಟೇ? ನಿಮ್ಮನ್ನೂ ನಾನು ತಿಳಿದವನಲ್ಲ" ಎಂದನು.



"ಹೌದು. ನೀವು ಹೇಳಿದ್ದು ನಿಜವೇ. ಆ ಕಳ್ಳರಿಬ್ಬರನ್ನೂ ಕರೆಯಿಸಿ ನನ್ನ ಸಮಕ್ಷಮದಲ್ಲಿ ಪ್ರಶ್ನಿಸಿರಿ. ಸತ್ಯ ಸಂಗತಿ ಗೊತ್ತಾಗಿಬಿಡಬಹುದು" ಎಂದನು ಉನ್ನತಾಧಿಕಾರಿ.

ಗ್ರಾಮಾಧಿಕಾರಿ ಕತ್ತಲೆಯ ಕೋಣೆಯಲ್ಲಿರಿಸಿದ್ದ ಇಬ್ಬರನ್ನೂ ಕರೆಯಿಸಿ, ಮೊದಲು ಕೇಳಿದಂತೆಯೇ, "ಇನ್ನಾದರೂ ನಿಜ ಸಂಗತಿ ಹೇಳಿಬಿಡಿರಿ. ಇಲ್ಲದಿದ್ದರೆ ಇನ್ನೂ ಕತ್ತಲೆಯ ಕೋಣೆಯಲ್ಲಿ ಬೀಳಬೇಕಾದೀತು? ಈ ಹಣದ ಚೀಲ ನಿಮ್ಮಿಬ್ಬರಲ್ಲಿ ಯಾರದು?" ಎಂದು ಕೇಳಿದನು.

ಇಬ್ಬರೂ ಮೊದಲು ಹೇಳಿದ ಹಾಗೆಯೇ ನನ್ನದು, ನನ್ನದೆಂದೇ ಹೇಳಿದರು.

ಗ್ರಾಮಾಧಿಕಾರಿ ಅವರ ಕಡೆಗೆ ಕೋಪದಿಂದ ನೋಡುತ್ತ, "ಇದು ನಿಮ್ಮಿಬ್ಬರಲ್ಲಿ ಯಾರದೂ ಅಲ್ಲ. ರಾಜಧಾನಿಯಿಂದ ಬಂದ ಈ ಉನ್ನತಾಧಿಕಾರಿಯ ಚೀಲವಿದು. ಈಗಾದರೂ ನೀವು ಜತೆ ಕಳ್ಳರೆಂದು ಒಪ್ಪಿಕೊಂಡರೆ ಸಣ್ಣ ಶಿಕ್ಷೆಯನ್ನು ಕೊಟ್ಟು ಬಿಟ್ಟುಬಿಡುತ್ತೇನೆ" ಎಂದನು.

ಗ್ರಾಮಾಧಿಕಾರಿ ಹಾಗೆ ಹೇಳುತ್ತಲೇ ಅವರಲ್ಲಿ ಒಬ್ಬನು ಬಹಳ ಸಂಕಟದಿಂದ, "ಅಯ್ಯಾ, ಈ ರಾಜ್ಯದಲ್ಲಿ ಧರ್ಮಕ್ಕೆ ಯಾವುದೋ ಪೀಡಾಕ್ರಿಮಿ ಅಂಟಿಕೊಂಡಿದೆ. ನನ್ನ ಕಷ್ಟಾರ್ಜಿತವನ್ನು ಇದುವರೆಗೆ ಒಬ್ಬನು ಅಪಹರಿಸಲು ನೋಡುತ್ತಾನೆ. ಅದು ಸಾಲದೆ ಉನ್ನತಾಧಿಕಾರಿಯೆನ್ನುತ್ತ ಈಗ ಇನ್ನೊಬ್ಬನು ಬಂದು ತಾನು ವಶಪಡಿಸಿಕೊಳ್ಳುವ ಪ್ರಯತ್ನದಲ್ಲಿರುವಂತಿದೆ. ನ್ಯಾಯನಿರ್ಣಯ ಮಾಡಬೇಕಾದ ಪ್ರಾಮಾಣಿಕರಾದ ಬುದ್ಧಿಶಾಲಿಗಳಿಗೇ ಬರ ಬಂದಿತು" ಎಂದು ಹಣೆ ಬಡೆದುಕೊಂಡನು.

ಆಗ ಎರಡನೆಯವನು ಬಹಳ ರೊಚ್ಚಿಗೆದ್ದು, ಗ್ರಾಮಾಧಿಕಾರಿಯನ್ನು ನೋಡಿ, "ನ್ಯಾಯ ನಿರ್ಣಯ ಮಾಡುವುದು ನಿಮ್ಮ ಶಕ್ತಿಗೆ ಮೀರಿದ ಕೆಲಸವೆಂದಾಯಿತು. ಇದಕ್ಕೆ ಬಹಳ ಜಾಣತನವೂ ಬುದ್ಧಿ ಸೂಕ್ಷ್ಮತೆಯೂ ಬೇಕು. ಆ ಎರಡೂ ನಿಮಗಿಲ್ಲ. ಆದ್ದರಿಂದ ಯಾರೋ ಉನ್ನತಾಧಿಕಾರಿಯೆಂದು ಬಂದ ಕೂಡಲೇ ಹಣದ ಚೀಲ ಅವರದೆಂದು ತೀರ್ಪು ಹೇಳುವಿರಿ" ಎಂದನು.

ಗ್ರಾಮಾಧಿಕಾರಿ ಬರುವ ಕೋಪವನ್ನು ನುಂಗಿಕೊಳ್ಳುತ್ತ, "ಹಾಗೇನು? ಈ ಮಾತುಗಳನ್ನು ಇಷ್ಟು ದೃಢವಾಗಿ ನೀನು ಹೇಗೆ ಹೇಳುತ್ತೀ?" ಎಂದು ಕೇಳಿದನು.

"ಹೇಗೆಂದರೆ, ನನ್ನೊಂದಿಗೆ ಕತ್ತಲೆ ಕೋಣೆಯಲ್ಲಿದ್ದ ಇವನು ಇಲ್ಲಿಯ ಛತ್ರದಲ್ಲಿ ಸೇರುವುದಕ್ಕೆ ಮೊದಲು ಒಂದು ಗ್ರಾಮದಲ್ಲಿ ಆ ಹಣವನ್ನು ಎಣಿಸಿ ಒಬ್ಬ ವ್ಯಾಪಾರಿಯಿಂದ ತೆಗೆದುಕೊಂಡುದನ್ನು ನಾನು ಕಣ್ಣಾರೆ ಕಂಡಿದ್ದೇನೆ. ಸ್ವಾರ್ಥದ ಕಾರಣದಿಂದಲೋ, ಅಶಕ್ತತೆಯಿಂದಲೋ ನೀವು ನ್ಯಾಯದ ಹೆಸರಿನಲ್ಲಿ ಇಂತಹ ಅನ್ಯಾಯದ ತೀರ್ಪು ಕೊಡುವಿರಿ. ನಿಮ್ಮ

ಮೇಲೆ ರಾಜಧಾನಿಯಲ್ಲಿ ಫಿರ್ಯಾದಿ ಮಾಡುತ್ತೇನೆ" ಎಂದನು ನಿಜವಾದ ಕಳ್ಳ.

ಅದನ್ನು ಕೇಳಿ ಗ್ರಾಮಾಧಿಕಾರಿ ಉನ್ನತಾಧಿಕಾರಿಯನ್ನು ನೋಡಿ ಕೋಪ ತಂದುಕೊಂಡು, ಏನೋ ಹೇಳಲಿರುವಾಗ, ಅವನು ಮುಗುಳು ನಗುತ್ತ, "ಹೇಗಾದರೇನು? ನಿಜವಾದ ಕಳ್ಳ ಸಿಕ್ಕಿಬಿದ್ದನಷ್ಟೇ? ಪರಿಸ್ಥಿತಿಯ ಕಾರಣದಿಂದಾಗಿ ಮನುಷ್ಯರು, ಕೆಟ್ಟವರೋ ಒಳ್ಳೆಯವರೋ ಆಗುತ್ತಾರೆಂಬುದು ನಿಜ" ಎಂದನು.

ಆ ಮಾತು ಕೇಳಿ ಗ್ರಾಮಾಧಿಕಾರಿ ಕಣ್ಣು ಕಿಸಿದು, "ಉನ್ನತಾಧಿಕಾರಿಯ ವೇಷದಲ್ಲಿ ಮೋಸಮಾಡುತ್ತ ಮಹಾರಾಜರಿಗೆ ಅಪಕೀರ್ತಿ ತರುವುದು ಕ್ಷಮಿಸಲಾಗದ ಮಹಾಪರಾಧ. ನಿನ್ನನ್ನು ಈಗಲೇ ನಗರಕ್ಕೆ ಒಯ್ದು ಮಹಾರಾಜರ ಮುಂದೆ ನಿಲ್ಲಿಸಿ ಫಿರ್ಯಾದಿ ಮಾಡುತ್ತೇನೆ" ಎಂದನು.

"ನಾನೂ ಸಾಕ್ಷಿಯಾಗಿ ತಮ್ಮ ಹಿಂದೆ ಬರುತ್ತೇನೆ" ಎಂದನು ಕಳ್ಳ.

ಉನ್ನತಾಧಿಕಾರಿ ಆ ಇಬ್ಬರನ್ನೂ ಮೆಚ್ಚಿಕೊಳ್ಳುವಂತೆ ನೋಡಿ, "ಕಾರಣವೇನೇ ಆದರೂ ನೀವಿಬ್ಬರಿಗೂ ನ್ಯಾಯ ನಿರ್ಣಯದ ಮೇಲಿರುವ ಶ್ರದ್ಧೆಯನ್ನು ನೋಡಿ ನನಗೆ ಸಂತೋಷವಾಗುತ್ತದೆ. ಹಣವು ತನಗೆ ಸಿಕ್ಕದಿರುವಾಗ ಅದು ಅದರ ನಿಜವಾದ ಹಕ್ಕುದಾರನಿಗೇ ಹೋಗಬೇಕೆಂಬ ಒಳ್ಳೆಯ ಬುದ್ಧಿ ಕಳ್ಳನಿಗೆ ಬಂದುದು ಮೆಚ್ಚಬೇಕಾದ್ದೇ. ಅವನು ಹೇಳುವ ಹಾಗೆ ನಾನೂ ಒಬ್ಬ ಮೋಸಗಾರನೇ ನಿಜ" ಎಂದು ತನ್ನ ಮಾರುವೇಷವನ್ನು ತೊಲಗಿಸಿದನು.

ಅದನ್ನು ನೋಡಿ ಗ್ರಾಮಾಧಿಕಾರಿಯೂ, ಹಣದ ಚೀಲದ ಸ್ವಂತದವನೂ, ಕಳ್ಳನೂ ಬೆರಗಾಗಿ ಹೋದರು. ಗ್ರಾಮಾಧಿಕಾರಿಗೂ ಅವನ ಗುರುತು ಹತ್ತಿ ಎದ್ದುನಿಂತು ಕೈಜೋಡಿಸಿದನು.

ರಾಜನು ಸ್ವತಃ ಹಣದ ಚೀಲವನ್ನು ಅದರ ಸ್ವಂತದವನಿಗೆ ಕೊಟ್ಟು, ಗ್ರಾಮಾಧಿಕಾರಿಯೊಂದಿಗೆ, "ನಿನ್ನಂಥವನೊಬ್ಬನು ನನಗೆ ಸಲಹಾದಾರನಾಗಿದ್ದರೆ ನನಗೆ ಬಹಳ ಸಹಾಯವಾಗುತ್ತದೆ. ನಿನ್ನನ್ನು ನನ್ನ ಸಲಹಾದಾರರಲ್ಲಿ ಒಬ್ಬನಾಗಿ ನಿಯಮಿಸುತ್ತೇನೆ. ಸಲಹಾದಾರನಿಗೆ ಅಂಗರಕ್ಷಕನೂ ಬೇಕಾಗುತ್ತದೆ. ಪ್ರಾಮಾಣಿಕನಾದ ಈ ಕಳ್ಳನನ್ನು ನಿನ್ನ ಅಂಗರಕ್ಷಕನನ್ನಾಗಿ ನಿಯಮಿಸಿದರೆ ಆಗಬಹುದಷ್ಟೆ?" ಎಂದನು.

"ತಮ್ಮ ಇಷ್ಟವೇ ನನ್ನ ಇಷ್ಟ, ಮಹಾಪ್ರಭೂ" ಎಂದನು ಗ್ರಾಮಾಧಿಕಾರಿ.

ಕಳ್ಳನು ಈ ಆಕಸ್ಮಿಕದಿಂದ ಆನಂದವನ್ನು ತಾಳಲಾಗದೆ ರಾಜನಿಗೂ ಗ್ರಾಮಾಧಿಕಾರಿಗೂ ಸಾಷ್ಟಾಂಗವಾಗಿ ಬಿದ್ದು ಎದ್ದು ನಿಂತನು. ಎಲ್ಲರಿಗೂ ಬೆರಗು ಸೇರಿದ ಆನಂದವೇ ಆಯಿತು.





# ಉತ್ತರ ರಾಮಾಯಣ

**ಪಾ**ತಾಳದಲ್ಲಿರುವ ಸುಮಾಲಿಗೆ ತನ್ನ ಮೂವರು ಮೊಮ್ಮಕ್ಕಳೂ ಬ್ರಹ್ಮನನ್ನು ಮೆಚ್ಚಿಸಿ ದೊಡ್ಡ ದೊಡ್ಡ ವರಗಳನ್ನು ಪಡೆದ ಸಂಗತಿ ತಿಳಿದು ಸಂತೋಷವಾಯಿತು. ಸುಮ್ಮನಿರಲಾಗದೆ ಅವನು ಕೂಡಲೇ ಪಾತಾಳದಿಂದ ಮೇಲೇಳುವ ಆಲೋಚನೆಗೆ ತೊಡಗಿದನು.

ತನ್ನ ಮಂತ್ರಿಗಳಾದ ಮಾರೀಚ, ಪ್ರಹಸ್ತ, ವಿರೂಪಾಕ್ಷ ಮಹೋದರರಂತಹ ಮುಖ್ಯಸ್ಥರನ್ನು ಕರೆದುಕೊಂಡು ಅಟ್ಟಹಾಸದಿಂದ ಹೊರಟು ಭೂಮಿಯ ಮೇಲೆ ಬಂದು ಉತ್ಸಾಹದಿಂದ ರಾವಣನ ಹತ್ತಿರ ಹೋದನು.

ಸುಮಾಲಿ ರಾವಣನನ್ನು ಆಲಿಂಗಿಸಿಕೊಂಡು, "ಕಂದಾ, ಇಷ್ಟು ಕಾಲದ ಮೇಲೆ ನನ್ನ ಕೋರಿಕೆ ಹಣ್ಣಾಯಿತು. ಯಾವ ವಿಷ್ಣುವಿನ ಭಯದಿಂದ ನಾವೆಲ್ಲಾ ಲಂಕೆಯನ್ನು ಬಿಟ್ಟು ಪಾತಾಳಕ್ಕೆ ಹೊರಟು ಹೋದೆವೋ ಆ ವಿಷ್ಣುವಿನ ಭಯ ಈಗ ಹೋಯಿತು. ಹೇಗೆಂದರೆ ನೀನು ಬ್ರಹ್ಮದೇವನನ್ನು ಮೆಚ್ಚಿಸಿ ಉತ್ತಮವಾದ, ನಮ್ಮ ಅಭಿವೃದ್ಧಿಗೆ ಸಾಧಕವಾದ ವರಗಳನ್ನು ಪಡೆದಿರುವಿ. ನಿಜಕ್ಕೂ ಲಂಕಾ ನಗರವು ರಾಕ್ಷಸರಿಗೇ ಸ್ವಂತವಾದುದು. ಬುದ್ಧಿ ಶಾಲಿಯಾದ ನಿನ್ನ ಸವತಿ ತಾಯಿಯ ಮಗನಾದ ಕುಬೇರನು ಅದನ್ನು ಆಕ್ರಮಿಸಿಕೊಂಡು ಕುಳಿತಿದ್ದಾನೆ. ನೀನು ಸಮಯ ನೋಡಿ ಒಳ್ಳೆಯ ಮಾತಿನಿಂದಲೋ, ಲಂಚ ಕೊಟ್ಟೋ, ಕಡೆಗೆ ಬಲಾತ್ಕಾರದಿಂದಲೇ ಆದರೂ ನಿನ್ನ ಅಣ್ಣನ ಕೈಯಿಂದ ಲಂಕೆಯನ್ನು ತಿರುಗಿ ಪಡೆಯಬೇಕು. ಎಲ್ಲಾ ವಿಧದಲ್ಲಿಯೂ ತಕ್ಕವನಾದ ನೀನೇ ಲಂಕಾ ನಗರಕ್ಕೆ ರಾಜನಾಗಿ ಪಾಲಿಸಿಕೊಂಡಿದ್ದರೆ ದಿಕ್ಕಿಲ್ಲದೆ ಹೋದ ರಾಕ್ಷಸ ವಂಶ ವನ್ನು ಉದ್ಧರಿಸಿದವನಾಗುವಿ. ರಾಕ್ಷಸರಾರೂ ನಿನ್ನನ್ನು ಮರೆಯಲಾರರು. ಇದರಿಂದ ನಿನ್ನ ಕೀರ್ತಿಯೂ ದೊಡ್ಡದಾಗುತ್ತದೆ" ಎಂದನು.

ಅದನ್ನೆಲ್ಲಾ ಕೇಳಿ ರಾವಣನು "ನೀವೇನು ಹೇಳುವಿರಿ ತಾತಾ? ಕುಬೇರನು ನಮಗೆ ತಂದೆಗೆ ಸಮಾನನು. ಅಂಥವನನ್ನು ಕುರಿತು ನೀವು ಹೀಗೆಲ್ಲಾ

೩. ರಾವಣನ ಲಂಕಾ ನಗರ ಪ್ರವೇಶ



ಹೇಳುವುದುಂಟೆ? ಅಂಥಾ ಧರ್ಮಬಾಹಿರವಾದ ಮಾತುಗಳನ್ನು ನಾನು ಕೇಳುವುದೂ ತಪ್ಪು ತಾತಾ" ಎಂದನು ರಾವಣ.

ಸುಮಾಲಿಗೆ ಮತ್ತೇನು ಹೇಳಲಿಕ್ಕೂ ತೋರಲಿಲ್ಲ. ಆಗ ಸುಮಾಲಿಯ ಮಂತ್ರಿಗಳಲ್ಲಿ ಒಬ್ಬನಾದ ಪ್ರಹಸ್ತನು ರಾವಣನನ್ನು ಏಕಾಂತದಲ್ಲಿ ಸಂಧಿಸಿ, ಈ ವಿಧವಾಗಿ ತನ್ನ ವಾಕ್ಚಾತುರ್ಯದಿಂದ ಆರೆದರೆದು ಹೇಳತೊಡಗಿದನು :

"ಅಪ್ಪಾ, ರಾವಣಾ, ನೀನು ನಿನ್ನ ತಾತಯ್ಯನೊಂದಿಗೆ ಹೇಳಿದ ಮಾತು ಸಂಭಾವ್ಯವಾದುದಲ್ಲ. ಶೂರರಾದವರಿಗೆ ಅಣ್ಣ ತಮ್ಮ ಎಂಬ ವಿಚಕ್ಷಣೆಯಿರಬಾರದು. ಅಣ್ಣ ತಮ್ಮಂದಿರ ವೈರವು ಆದಿಯಿಂದಲೂ ಬಂದುಕೊಂಡೇ ಇದೆ. ಅದರ ಮೇಲೆ ಕುಬೇರನು ನಿನಗೆ ಸವತಿಯಣ್ಣನಷ್ಟೇ ತಾನೇ? ಅದಿತಿಯೂ ದಿತಿಯೂ ಅಕ್ಕ ತಂಗಿಯರು. ಇಬ್ಬರೂ ಕಶ್ಯಪಬ್ರಹ್ಮನ ಪತ್ನಿಯರಾಗಿ ದೇವತೆಗಳನ್ನೂ, ರಾಕ್ಷಸರನ್ನೂ ಹಡೆದಿದ್ದಾರೆ, ಆದರೆ ವಿಷ್ಣು ರಾಕ್ಷಸರನ್ನು ಸದೆಬಡಿದು ಮೂರು ಲೋಕಗಳನ್ನೂ ದೇವತೆಗಳಿಗೇ ಕೊಟ್ಟಿದ್ದಾನೆ. ಈ ಲಂಕೆ ಮಾತ್ರವಲ್ಲ, ಭೂಮಂಡಲವನ್ನೆಲ್ಲಾ ಒಂದು ಕಾಲದಲ್ಲಿ ರಾಕ್ಷಸರೇ ಅನುಭವಿಸಿಕೊಂಡಿದ್ದರು. ನಾವು ನಿನ್ನನ್ನು ಹೊಸತಾಗಿ ತಪ್ಪು ಕೆಲಸ ಮಾಡಲು ಹಚ್ಚುವುದಿಲ್ಲ. ಈ ಅನ್ಯಾಯವು ಎಂದಿನಿಂದಲೋ ನಡೆದುಕೊಂಡು ಬರುತ್ತಾ ಇದೆ. ನಿವಾರಿಸಲು ನಮ್ಮಲ್ಲಿ ತಕ್ಕವರಿಲ್ಲದೇ ಹೋದರು. ಈಗ ನೀನು ಅದಕ್ಕೆ ತಕ್ಕವನಾಗಿರುವಿ. ಆದುದರಿಂದ ನಾವು ಹೇಳಿದ ಹಾಗೆ ಮಾಡಿದರೆ ತಪ್ಪೇನೂ ಆಗುವುದಿಲ್ಲ. ನಿನ್ನಿಂದಾಗಿ ನಾವೆಲ್ಲರೂ ಸುಖವಾಗಿರಬಹುದು. ನೀನು ಪಡೆದ ವರಗಳಿಂದ ವಿಷ್ಣುವಿನ ಭಯವಂತೂ ಇಲ್ಲ."

ಅವನ ಬೋಧನೆಗಳನ್ನು ಕೇಳಿ ರಾವಣನು ಸ್ವಲ್ಪ ಯೋಚನೆ ಮಾಡಿ, ಕಡೆಗೆ ಆಗಲಿ ಎಂದು ಒಪ್ಪಿಕೊಂಡನು.

ಆಮೇಲೆ ಮಾತಿನಲ್ಲಿ ಜಾಣನಾದ ಪ್ರಹಸ್ತನನ್ನೇ ತನ್ನ ದೂತನಾಗಿ ಕುಬೇರನ ಬಳಿಗೆ ಕಳುಹಿಸಿದನು. ಅವನೊಡನೆ ರಾವಣನು ಹೀಗೆ ಹೇಳಿ ಕುಬೇರನಿಗೆ ಸಂದೇಶ ಕೊಟ್ಟಿದ್ದನು :

"ಅಣ್ಣಾ, ಈಗ ನಿನ್ನ ಅಧೀನದಲ್ಲಿರುವ ಲಂಕೆ, ರಾಕ್ಷಸರಿಗೆ ಸ್ವಂತದ್ದು. ಆದುದರಿಂದ ನೀನು ಒಳ್ಳೆಯದರಲ್ಲಿಯೇ ಲಂಕೆಯನ್ನು ರಾಕ್ಷಸರಿಗೆ ಒಪ್ಪಿಸಿಬಿಟ್ಟರೆ, ಧರ್ಮ ರೀತಿಯಾಗಿ ನಡೆದ ಹೆಸರು ನಿನಗೆ ಬರುತ್ತದೆ. ತಮ್ಮನ ಅಪೇಕ್ಷೆಯನ್ನು ತೀರಿಸಿದ ಒಳ್ಳೆಯ ಅಣ್ಣನು ನೀನಾಗುವಿ. ರಾಕ್ಷಸರೆಲ್ಲರೂ ನಿನ್ನನ್ನು ಮೆಚ್ಚುತ್ತಾರೆ."

ರಾವಣನ ಪರವಾಗಿ ಪ್ರಹಸ್ತನು ಬಂದು ಈ ಮಾತುಗಳನ್ನು ಹೇಳಿದ ಕೂಡಲೇ, ಕುಬೇರನು ರಾವಣನೊಂದಿಗೆ, ಹೀಗೆ ಹೇಳುವಂತೆ ಪ್ರಹಸ್ತನೊಂದಿಗೆ ಹೇಳಿ ಕಳುಹಿಸಿದನು : "ತಮ್ಮಾ,

ರಾವಣಾ, ನಮ್ಮ ತಂದೆ ನನಗೆ ಈ ಲಂಕಾ ನಗರವನ್ನು ಕೊಡುವಾಗ ಇಲ್ಲಿ ರಾಕ್ಷಸನೊಬ್ಬನೂ ಇರಲಿಲ್ಲ. ನಾನೂ ನನ್ನ ಯಕ್ಷರೂ ಇಲ್ಲಿ ವಾಸಮಾಡುತ್ತಿದ್ದೇವೆ. ನನ್ನ ರಾಜ್ಯವೂ, ನನ್ನ ಐಶ್ವರ್ಯಗಳೂ, ನನ್ನ ಪಟ್ಟಣವೂ ನಿನ್ನದೂ ಅಲ್ಲವೇನು ? ಲಂಕಾ ನ:ರವನ್ನು ನಿ ಗೆ ಕೊಡಲು ನನಗೆ ಸಂತೋಷವೇ ಆಗುತ್ತದೆ. ಇಲ್ಲಿಗೆ ಬಂದು ಹಾಯಾಗಿ ಲಂಕಾ ರಾಜ್ಯವನ್ನು ಆಳಿಕೋ. ಒಂದೇ ತಂದೆಯ ಮಕ್ಕಳಾದ ನಮ್ಮೊಳಗೆ ವ್ಯತ್ಯಾಸವನ್ನೇಕೆ ನೋಡುತ್ತೀ ? "



ಈ ಸಂದೇಶವನ್ನು ಪ್ರಹಸ್ತನ ಮೂಲಕ ಕಳುಹಿಸಿದ ಕುಬೇರನು ಈ ವಿಷಯವನ್ನು ತಂದೆಗೆ ತಿಳಿಸುವುದು ಧರ್ಮವೆಂದುಕೊಂಡು, ಕೂಡಲೇ ಪುಷ್ಪಕ ವಿಮಾ ವನ್ನೇರಿ ತನ್ನ ತಂದೆಯ ಹತ್ತಿರ ಹೋಗಿ ನಡೆದ ಸಮಾಚಾರವನ್ನು ಹೇಳಿದನು.

ವಿಶ್ರವಸು ಕುಬೇರನು ಹೇಳಿದುದನ್ನು ಕೇಳಿ, "ಅಪ್ಪಾ, ನಾನೊಂದು ಹೇಳುತ್ತೇನೆ, ಕೇಳು. ರಾವಣನು ಈ ಮಾತುಗಳನ್ನು ನನ್ನೊಂದಿಗೆ ಹೇಳಿದ್ದಕ್ಕೆ ನಾನು ಕೋಪಗೊಂಡಿದ್ದೆನು. ಈಗ ಅವನು ವರಗಳನ್ನು ಪಡೆದುಕೊಂಡು ಗರ್ವದಲ್ಲಿ ಮೈಮರೆತಿದ್ದಾನೆ. ನೀನು ಮಾತ್ರ ಲಂಕೆಯನ್ನು ಬಿಟ್ಟು, ಕೈಲಾಸ ಪರ್ವತದ ಮೇಲೆ ಹೋಗಿ ಅಲ್ಲಿಯೇ ನಿವಾಸದ ಏರ್ಪಾಡು ಮಾಡಿಕೋ. ಅಲ್ಲಿ ಮಂದಾಕಿನೀ ನದಿಯಲ್ಲಿ ಬಂಗಾರದ ತಾವರೆ ಹೂಗಳಿವೆ. ಆ ಪರ್ವತದ ಮೇಲೆ ಯಾವಾಗಲೂ ದೇವತೆಗಳೂ, ಅಪ್ಸರಸಿಯರೂ, ಉರಗರೂ, ಕಿನ್ನರರೂ ವಿಹರಿಸಿಕೊಂಡಿರುತ್ತಾರೆ. ಮುಖ್ಯವಾಗಿ ಪ್ರಸ್ತುತದಲ್ಲಿ ನೀನು ರಾವಣನೊಂದಿಗೆ ವೈರವಿಟ್ಟುಕೊಳ್ಳಬಾರದು. ಈಗ ನೀನು ಮಾಡಿದ ಕೆಲಸ ಯೋಗ್ಯವೇ ಆಗಿದೆ " ಎಂದು ಸಲಹೆ ಮಾಡಿದನು.

ಕುಬೇರನು ನಿರ್ಮಲ ಮನಸ್ಸಿನಿಂದ ತಂದೆಯ ಮಾತನ್ನು ಅಕ್ಷರಶಃ ಪಾಲಿಸುವವನಾಗಿ ತನ್ನ ಹೆಂಡತಿಯನ್ನೂ, ಮಕ್ಕಳನ್ನೂ, ಮಂತ್ರಿಗಳನ್ನೂ, ಪರಿವಾರವನ್ನೂ, ಧನವನ್ನೂ, ವಾಹನಗಳನ್ನೂ ತೆಗೆದುಕೊಂಡು ಕೈಲಾಸ ಪರ್ವತಕ್ಕೆ ಹೊರಟು ಹೋದನು. ತಂದೆ ಹೇಳಿದಂತೆಯೇ ಅದು ಅವನಿಗೆ ಎಲ್ಲ ವಿಧದಲ್ಲಿಯೂ ಆಹ್ಲಾದಕರವಾದ ಪ್ರದೇಶವಾಗಿತ್ತು.

ಪ್ರಹಸ್ತನು ಅತ್ಯಾನಂದದಿಂದ ರಾವಣನ ಬಳಿಗೆ ಬಂದು, "ರಾವಣಾ, ಲಂಕಾ ನಗರವು ಬಹು ಸುಲಭವಾಗಿ ಖಾಲಿಯಾಯಿತು. ಕುಬೇರನು ನಿನಗೆ ಹೆದರಿ ಒಳ್ಳೆಯ ಮರ್ಯಾದೆಯಿಂದಲೇ ಅಲ್ಲಿಂದ ತನ್ನ ಸಕಲ ಪರಿವಾರದೊಂದಿಗೆ ಹೊರಟುಹೋಗಿಬಿಟ್ಟನು. ಇನ್ನು ನೀನು ಅಲ್ಲಿಗೆ ಹೋಗಿ ನಮ್ಮವರನ್ನೆಲ್ಲಾ ಸೇರಿಸಿಕೊಂಡು ನಿರಾತಂಕವಾಗಿ ರಾಜ್ಯಭಾರ ಮಾಡು " ಎಂದನು.

ರಾವಣನು ತನ್ನ ತಮ್ಮಂದಿರನ್ನೂ, ಇತರ ಬಳಗವನ್ನೂ ಕರೆದುಕೊಂಡು ಲಂಕೆಗೆ ಹೋದನು. ಅಲ್ಲಿ



ಅವನಿಗೆ ಬಹು ವೈಭವದಿಂದ ರಾಜ್ಯಾಭಿಷೇಕ ವಾಯಿತು. ರಾಕ್ಷಸರಿಂದ ತುಂಬಿ ಕಿಕ್ಕಿರಿಸುವ ಲಂಕಾ ನಗರಕ್ಕೆ ಹೊಸ ಕಳೆ ಬಂದಿತು.

ಹೀಗೆ ಇಲ್ಲಿ ರಾವಣನು ಲಂಕಾ ನಗರವನ್ನು ಪಾಲಿಸಿಕೊಂಡಿರುವಾಗ, ಅಣ್ಣನಾದ ಕುಬೇರನು ಕೈಲಾಸ ಪರ್ವತದಲ್ಲಿ ಅಲಕಾ ನಗರವನ್ನು ನಿರ್ಮಿಸಿ ಕೊಂಡು ವೈಭವದಿಂದ ಅದನ್ನು ಪಾಲಿಸಲು ತೊಡಗಿದನು.

ಲಂಕಾಧಿಪತ್ಯವನ್ನು ಪಡೆದ ಮೇಲೆ ರಾವಣನು ತನ್ನ ತಂಗಿಯಾದ ಶೂರ್ಪಣಖೆಯನ್ನು, ಕಾಲಕೇಯ ವಂಶದಲ್ಲಿ ಹುಟ್ಟಿದ ವಿದ್ಯುಜ್ಜಿಹ್ವನೆಂಬವನಿಗೆ ಕೊಟ್ಟು ಮದುವೆ ಮಾಡಿದನು. ಅದು ರಾವಣನು ಮೊದಲು ಮಾಡಿದ ಕಲ್ಯಾಣ ಕಾರ್ಯ ಮಹೋತ್ಸವವೆನಿಸಿತು.

ಹಾಗೆ ಕಾಲ ಕಳೆಯುತ್ತಿರಲು, ಒಂದು ದಿನ ರಾವಣನು ಬೇಟೆಯಾಡಲು ಅರಣ್ಯಕ್ಕೆ ಹೋದನು. ಅಲ್ಲಿರುವ ಒಬ್ಬ ದೊಡ್ಡ ಮನುಷ್ಯನನ್ನೂ, ಅವನೊಂದಿಗಿರುವ ಸುಂದರೀಮಣಿಯಾದ ಒಬ್ಬಳು ಹುಡುಗಿಯನ್ನೂ ನೋಡಿದನು.

"ಯಾರು ನೀವು? ಅರಣ್ಯದಲ್ಲಿ ಈ ಹುಡುಗಿ ಯನ್ನಿಟ್ಟುಕೊಂಡು ಏಕೆ ತಿರುಗುತ್ತಿರುವಿರಿ?" ಎಂದು ರಾವಣನು ಆ ದೊಡ್ಡ ಮನಷ್ಯನನ್ನು ಕೇಳಿದನು.

ಆದಕ್ಕೆ ಆ ದೊಡ್ಡವನು ಹೀಗೆಂದನು: "ಅಪ್ಪಾ, ನಾನು ದಿತಿಯ ಮಗ. ಮಯನೆಂದು ನನ್ನ ಹೆಸರು. ನೀನು ಹೇಮಾ ಎಂಬ ಅಪ್ಸರಸಿಯನ್ನು ಕುರಿತು ಕೇಳಿರಬಹುದು. ದೇವತೆಗಳು ನನಗೆ ಆ ಹೇಮಳೊಂದಿಗೆ ಮದುವೆ ಮಾಡಿದರು. ಈ ಹುಡುಗಿ ನಮ್ಮಿಬ್ಬರಿಗೂ ಹುಟ್ಟಿದ ಮಗಳು. ಇವಳ ಹೆಸರು ಮಂದೋದರಿ. ಹದಿನಾಲ್ಕು ವರ್ಷಗಳ ಹಿಂದೆ ಹೇಮ ನನ್ನನ್ನು ಬಿಟ್ಟು ಸ್ವರ್ಗಕ್ಕೆ ಹೊರಟು ಹೋದಳು. ಈ ಹುಡುಗಿಗೆ ತಕ್ಕ ಗಂಡನನ್ನು ಹುಡುಕುತ್ತಾ ಹೀಗೆ ಹೊರಟಿದ್ದೇನೆ. ಈ ಹುಡುಗಿ ಮಾತ್ರವಲ್ಲದೆ ಮತ್ತಿಬ್ಬರು ಗಂಡು ಮಗಂದಿರನ್ನೂ ಹೇಮಳು ಹೆತ್ತಿದ್ದಾಳೆ. ಒಬ್ಬನ ಹೆಸರು ಮಾಯಾವಿ. ಎರಡನೆಯವನ ಹೆಸರು ದುಂದುಭಿ. ನನ್ನ ಸಂಗತಿ ಯನ್ನು ಕೇಳಿದುದರಿಂದ ಯಥಾರ್ಥವನ್ನು ಹೇಳಿ ದ್ದೇನೆ. ಇನ್ನು ನಿನ್ನ ಸಂಗತಿ ಕೂಡಾ ತಿಳಿಯುವ ಕುತೂಹಲದಲ್ಲಿದ್ದೇನೆ. ಹೇಳಿದರೆ ಸಂತೋಷಿಸುತ್ತೇನೆ."

"ನಾನು ಪುಲಸ್ತ್ಯಬ್ರಹ್ಮನ ಮೊಮ್ಮಗನು. ವಿಶ್ರವೋಬ್ರಹ್ಮನ ಮಗನು. ನನ್ನ ಹೆಸರು ದಶ ಗ್ರೀವ. ರಾವಣನೆಂತಲೂ ಹೆಸರಿದೆ. ಕುಂಭಕರ್ಣ, ವಿಭೀಷಣರೆಂಬ ತಮ್ಮಂದಿರೂ, ಒಬ್ಬಳು ತಂಗಿಯೂ ನನಗಿದ್ದಾರೆ" ಎಂದನು ರಾವಣ.

ರಾವಣನು ಮಹರ್ಷಿಗಳ ವಂಶದಲ್ಲಿ ಹುಟ್ಟಿದವ ನೆಂದು ತಿಳಿದುಕೊಡಲೇ ಮಯನು ತನ್ನ ಕುಮಾರಿ ಯನ್ನು ಅವನಿಗೆ ಕೊಟ್ಟು ಮದುವೆ ಮಾಡಲು ಸಿದ್ಧನಾದನು. ಆದಕ್ಕೆ ರಾವಣನೂ ತನ್ನ ಅಂಗೀಕಾರ ತಿಳಿಸಿದನು. ಆಗಲೇ ಅಲ್ಲಿಯೇ ಅಗ್ನಿಯನ್ನು

ಪ್ರಜ್ವಲಿಸಿ, ಮಯನು ತನ್ನ ಕುಮಾರಿಯ ಕೈಯನ್ನು ರಾವಣನ ಕೈಯಲ್ಲಿಟ್ಟು ವಿವಾಹ ಮಾಡಿದನು. ಆಗ ಮಯನು ಅಳಿಯನಿಗೆ ಒಂದು ಮಹಾ ಶಕ್ತ್ಯಾಯುಧ ವನ್ನು ಬಳುವಳಿಯಾಗಿ ಕೊಟ್ಟನು. ಅದು ದೊಡ್ಡ ತಪಸ್ಸಿನಿಂದ ಮಯನು ಪಡೆದುಕೊಂಡುದಾಗಿತ್ತು. ಆದರಿಂದಲೇ ರಾವಣನು ಮುಂದೆ ನಡೆದ ಮಹಾ ಯುದ್ಧದಲ್ಲಿ ಲಕ್ಷ್ಮಣನನ್ನು ಹೊಡೆದು ಮೂರ್ಛೆ ಬೀಳಿಸಿದ್ದು.

ರಾವಣನು ತನ್ನ ಹೆಂಡತಿಯೊಂದಿಗೆ ಸಹಾ ಲಂಕೆಗೆ ಹೋಗಿ ತನ್ನ ತಮ್ಮಂದಿರ ಮದುವೆಗೆ ಪ್ರಯತ್ನ ಮಾಡಿದನು. ವೈರೋಚನನ ಮೊಮ್ಮ ಗಳಾದ ವಜ್ರಜ್ವಾಲೆ ಎಂಬವಳನ್ನು ಕುಂಭಕರ್ಣನಿಗೂ, ಶೈಲೂಷನೆಂಬ ಗಂಧರ್ವ ರಾಜನ ಮಗಳು ಸರಮೆ ಎಂಬವಳನ್ನು ವಿಭೀಷಣನಿಗೂ ನಿಶ್ಚಯಿಸಿ ಒಂದೇ ಕಾಲದಲ್ಲಿ ಇಬ್ಬರ ಮದುವೆಯನ್ನೂ ವೈಭವದಿಂದ ಮಾಡಿದನು. ಹೀಗೆ ಲಂಕಾ ನಗರವು ಇನ್ನಷ್ಟು ಪ್ರಸಿದ್ಧವಾಯಿತು.

ಮೂವರು ಅಣ್ಣ ತಮ್ಮಂದಿರೂ ತಮ್ಮ ತಮ್ಮ ಹೆಂಡತಿಯರೊಂದಿಗೆ ಸುಖವಾಗಿ ಸಂಸಾರ ನಡೆಸಿ ಕೊಂಡಿರುವಾಗ, ರಾವಣನ ಹೆಂಡತಿ ಮಂಡೋದರಿ ಮೇಘನಾದನನ್ನು ಹೆತ್ತಳು. ಅವನು ಭೂಮಿಯ ಮೇಲೆ ಬಿದ್ದಕೂಡಲೇ ಆಕಾಶವು ಗುಡುಗಿದಂತೆ ಅತ್ತನಂತೆ. ಆದುದರಿಂದ ಅವನಿಗೆ ಮೇಘನಾದ ನೆಂದು ಹೆಸರಿಟ್ಟಿದ್ದಾರೆ. ಆ ಹುಡುಗನ ಮೇಲೆ ತಂದೆ ತಾಯಿಗಳಿಗೆ ಅಪರಿಮಿತ ಪ್ರೀತಿ. ಅವನ ಮೇಲೆಯೇ ರಾವಣನ ನಂಬುಗೆ ಪೂರ್ಣವಾಗಿತ್ತು. ಅವನನ್ನು ರಾವಣನಿಗಿಂತಲೂ ಹೆಚ್ಚಿನವನೆನ್ನ ಬಹುದು. ಆ ಮೇಘನಾದನೇ ಲಕ್ಷ್ಮಣನ ಕೈಯಲ್ಲಿ ಸತ್ತುಹೋದ ಇಂದ್ರಜಿತ್ತು.

ಒಂದುಸಾರಿ ರಾವಣನು ಒಡ್ಡೋಲಗ ನಡೆಸಿ ಕೊಂಡಿದ್ದಾಗ ಕುಂಭಕರ್ಣನು ಬ್ರಹ್ಮಾಂಡದಂತೆ



ಆಕಳಿಸಿ, ಜಡಭಾರವನ್ನು ತಾಳಲಾಗದೆ ಮೈಕೈ ಮುರಿದುಕೊಳ್ಳುತ್ತಾ, "ಅಣ್ಣಾ, ನಿದ್ರೆ ಒತ್ತೊತ್ತಿ ಬರುತ್ತಾ ಇದೆ. ನಾನು ಸುಖವಾಗಿ ನಿದ್ದೆಮಾಡಲು ಏನಾದರೂ ಏರ್ಪಾಡು ಮಾಡಿಕೊಡು" ಎಂದು ಕೇಳಿಕೊಂಡನು.

ಅದು ಸಾಧಾರಣ ನಿದ್ರೆಯಲ್ಲ. ಬ್ರಹ್ಮನು ಕೊಟ್ಟ ವರದಿಂದ ಆಕ್ರಮಿಸಿಕೊಂಡ ದೀರ್ಘಕಾಲದ ನಿದ್ರೆಯಾಗಿತ್ತು.

ರಾವಣನು ಪ್ರಿಯ ತಮ್ಮನಾದ ಕುಂಭಕರ್ಣನಿ ಗಾಗಿ ಅದ್ಭುತವಾದೊಂದು ನಿದ್ರಾ ಮಂದಿರವನ್ನು ಕಟ್ಟಿಸಿಕೊಟ್ಟನು. ಅದು ತುಂಬಾ ಅಗಲವಾಗಿ, ಅದಕ್ಕಿಂತ ಎರಡು ಪಾಲು ಹೆಚ್ಚು ಉದ್ದವಾಗಿ ಸ್ಫಟಿಕಶಿಲಾ ಸ್ತಂಭಗಳಿಂದ, ದಂತಗಳ ದ್ವಾರ ತೋರಣಗಳಿಂದ, ಬಂಗಾರದ ದ್ವಾರ ಬಂಧಗಳಿಂದ, ಮಣಿ ಮಾಣಿಕ್ಯಗಳನ್ನು ಹೊದಗಿಸಿದ ಗೋಡೆ ಗಳಿಂದ ಸೊಗಸಾದ ಅಲಂಕಾರ ಮಂದಿರವೇ ಆಗಿತ್ತು.



ಕುಂಭಕರ್ಣನು ಅಲ್ಲಿ ಮಲಗಿಕೊಂಡು ವರ್ಷಗಟ್ಟಲೆ ನಿದ್ರೆ ಮಾಡಿಕೊಂಡಿರತೊಡಗಿದನು. ನಿದ್ರಾ ಸುಖವನ್ನು ಪೂರ್ಣವಾಗಿ ಅನುಭವಿಸಿಕೊಂಡಿದ್ದನು.

ಒಂದುಕಡೆ ಕುಂಭಕರ್ಣನು ಹಾಗೆ ಮಲಗಿ ನಿದ್ದೆಯಲ್ಲಿ ಮುಳುಗಿರುವಾಗ, ರಾವಣನು ತನ್ನ ಅಸಾಧಾರಣವಾದ ಬಲಗಳನ್ನು ಹೊಂದಿಸಿಕೊಂಡು ದಿಗ್ವಿಜಯ ಮಾಡುತ್ತ, ದೇವತೆಗಳನ್ನೂ, ಮುನಿಗಳನ್ನೂ, ಯಕ್ಷರನ್ನೂ, ಗಂಧರ್ವರನ್ನೂ ಯಥೇಚ್ಛೆಯಾಗಿ ಪೀಡಿಸತೊಡಗಿದನು. ಮದಿಸಿದ ಆನೆ ನೀರಿನೊಳಗೆ ಪ್ರವೇಶಿಸಿ, ಕೆದಕಾಡಿದ ಹಾಗೆ ರಾವಣನು ದೇವತೆಗಳ ನಂದನೋದ್ಯಾನ ಮೊದಲಾದುವನ್ನು ಧ್ವಂಸ ಮಾಡಿದನು. ಅವನನ್ನು ತಡೆಯುವವರೇ ಇಲ್ಲದೇ ಹೋದರು.

ತನ್ನ ತಮ್ಮನು ಮಾಡುವ ಕೆಲಸಗಳನ್ನು ನೋಡಿ ಕುಬೇರನು ಬಹಳವಾಗಿ ನೊಂದುಕೊಂಡು, ತನ್ನ ವಂಶಗೌರವಕ್ಕೆ ಸಲ್ಲದ ದುಷ್ಟತನಗಳನ್ನು ಬಿಡುವಂತೆ ಬೋಧನೆ ಮಾಡಬೇಕೆಂದುಕೊಂಡು ರಾವಣನ ಬಳಿಗೆ ಒಬ್ಬ ದೂತನನ್ನು ಕಳುಹಿಸಿದನು. ಆ ದೂತನು ಲಂಕೆಗೆ ಬಂದು ಮೊದಲು ವಿಭೀಷಣನನ್ನು ನೋಡಿದನು. ವಿಭೀಷಣನು ಆ ದೂತನಿಗೆ ತಕ್ಕ ಗೌರವ ಮರ್ಯಾದೆಗಳನ್ನು ಮಾಡಿ, ಕುಬೇರನ ಕ್ಷೇಮ ಸಮಾಚಾರಗಳನ್ನು ಕೇಳಿ ತಿಳಿದು, ಅವನು ಬಂದ ಕೆಲಸವೇನೆಂದು ವಿಚಾರಿಸಿದನು.

ದೂತನು ಹೇಳಿದುದನ್ನು ಕೇಳಿ, ವಿಭೀಷಣನು ಅವನನ್ನು ರಾವಣನ ಬಳಿಗೆ ಕರೆದುಕೊಂಡು ಹೋದನು.

ರಾವಣನಿಗೆ ಕುಬೇರನು ಕಳುಹಿಸಿದ ಮಾತುಗಳೇನೆಂದರೆ, "ತಮ್ಮಾ ರಾವಣಾ, ಈಗಾಗಲೇ ನಿನಗೆ ದೊಡ್ಡ ಕೀರ್ತಿ ಬಂದಿದೆ. ಅಷ್ಟಕ್ಕೇ ತೃಪ್ತನಾಗಿ ಇನ್ನು ಮೇಲೆ ಸಾಧ್ಯವಾದಷ್ಟು ಸಾಧು ಮಾರ್ಗದಲ್ಲಿ ನಡೆಯುವುದು ಒಳ್ಳೆಯದು. ನೀನು ಧ್ವಂಸ ಮಾಡಿದ ನಂದನವನ್ನು ನಾನು ಕಣ್ಣಾರೆ ನೋಡಿದ್ದೇನೆ. ಋಷಿಗಳನ್ನು ಕೊಂದಿರುವುದಾಗಿ ಕೇಳಿದ್ದೇನೆ. ನಿನ್ನಿಂದ ಪೀಡಿಸಲ್ಪಟ್ಟ ದೇವತೆಗಳು ನಿನ್ನ ಮೇಲೆ ಹಗೆ ತೀರಿಸಿಕೊಳ್ಳುವ ಪ್ರಯತ್ನದಲ್ಲಿದ್ದಾರೆಂದು ತಿಳಿದು ಬಂದಿದೆ. ನಾನು ಈ ನಡುವೆ ರೌದ್ರ ವ್ರತವನ್ನು ನಿಯಮಿತವಾಗಿ ಮಾಡಲೆಳಸಿ ಹಿಮಾಲಯಕ್ಕೆ ಹೋಗಿ ಅಲ್ಲಿ ಶಿವನೊಂದಿಗೆ ಇದ್ದ ಪಾರ್ವತೀದೇವಿಯನ್ನು ನೋಡಿದೆನು. ಯಾವ ಉದ್ದೇಶವೂ ಇಲ್ಲದೆಯೇ ಪಾರ್ವತಿಯ ಸೌಂದರ್ಯಕ್ಕೆ ಬಂದಿಯಾಗಿ ನನ್ನ ಎಡದ ಕಣ್ಣು ಅವಳ ಮೇಲೆ ಬಿತ್ತು. ಕೂಡಲೇ ನನ್ನ ಕಣ್ಣು ಸುಟ್ಟು ಪಿಂಗಳ ವರ್ಣವಾಯಿತು. ಆಮೇಲೆ ನಾನು ಅಪಾರವಾದ ಆ ಪರ್ವತದ ಮೇಲೆ ಮತ್ತೊಂದು ಕಡೆಗೆ ಹೋಗಿ ರೌದ್ರ ವ್ರತವನ್ನು ಅವಲಂಬಿಸಿದೆನು. ನಿಯಮದಂತೆ ಆ ವ್ರತವು ಪೂರ್ತಿಯಾದ ಮೇಲೆ ಈಶ್ವರನು ಮೆಚ್ಚಿ, ತಾನು ಒಂದು ಕಾಲದಲ್ಲಿ ಈ ವ್ರತವನ್ನು

ಮಾಡಿದ್ದೇನೆಂದೂ, ಅನಂತರ ಆ ವ್ರತವನ್ನು ಮಾಡಿದವನು ನೀನೇ ಎಂದೂ ಹೇಳಿ, ನನ್ನನ್ನು ತನ್ನ ಸ್ನೇಹಿತನಾಗಿರಬೇಕೆಂದು ಹೇಳಿದನು. ಶಿವನು ನನಗೆ ಏಕಾಕ್ಷೀ ಪಿಂಗಳನೆಂಬ ಹೆಸರನ್ನೂ ಕೊಟ್ಟನು. ಶಿವನಿಂದ ಅಪ್ಪಣೆ ಪಡೆದು ನನ್ನ ಮನೆಗೆ ಹಿಂದಿರುಗಿದಾಗ ನೀನು ಮಾಡಿದ ದುಷ್ಕೃತ್ಯಗಳ ಮಾತುಗಳು ಕಿವಿಗೆ ಬಿದ್ದುವು. ವಂಶಕ್ಕೆ ಕೆಟ್ಟ ಹೆಸರು ತರುವ ಅಂಥಾ ಹೇಯ ಕಾರ್ಯಗಳನ್ನು ಬಿಟ್ಟುಬಿಡು. ಅಪ್ಪಾ ರಾವಣಾ, ಮುನಿಗಳೂ ದೇವತೆಗಳೂ ಸೇರಿ ನಿನ್ನ ಮರಣಕ್ಕೆ ಉಪಾಯ ಹುಡುಕುತ್ತಿದ್ದಾರೆಂದು ಗೊತ್ತಾಗಿದೆ. ಆದುದರಿಂದಲೇ ನಿನಗೆ ಹೀಗೆ ಎಚ್ಚರಿಕೆ ಹೇಳಬೇಕಾಯಿತು."

ದೂತನು ಈ ರೀತಿಯಾಗಿ ಕುಬೇರನ ಮಾತುಗಳನ್ನು ರಾವಣನ ಮುಂದೆ ಹೇಳಲು, ರಾವಣನು ಕೋಪಾವೇಶದಲ್ಲಿ "ಎಲೋ ದೂತಾ ! ಈ ಮಾತುಗಳನ್ನು ಹೇಳಿದ ನಿನ್ನನ್ನೂ, ಹೇಳಿಸಿದ ನನ್ನಣ್ಣನನ್ನೂ ಏನು ಮಾಡುತ್ತೇನೆಂದು ನೋಡು. ಕುಬೇರನು ನನಗೆ ಹಿತಬೋಧೆ ಮಾಡುವಷ್ಟರ ಮಟ್ಟಿಗೆ ಇದ್ದಾನೇನು ? ತನಗೆ ಶಿವನ ಸ್ನೇಹ ದೊರಕಿತೆಂದು ನನಗೆ ಹೇಳುವನೇ ? ದೊಡ್ಡವನೂ, ತಂದೆಗೆ ಸಮಾನನೂ ಎಂದುಕೊಂಡು ಇಷ್ಟರವರೆಗೆ ಕೊಲ್ಲದೆ ಬಿಟ್ಟಿದ್ದೇನೆ. ನಿನ್ನ ಮಾತುಗಳನ್ನು ಕೇಳಿದ ಮೇಲೆ ಮೂರು ಲೋಕಗಳನ್ನೂ ಜಯಿಸಬೇಕೆಂದು ತೋರುತ್ತಿದೆ. ನನ್ನ ಅಣ್ಣನ ಕಾರಣದಿಂದ, ಉಳಿದ ದಿಕ್ಪಾಲಕರನ್ನು ಕೂಡಾ ನಾಶಮಾಡಿಬಿಡುತ್ತೇನೆ" ಎನ್ನುತ್ತ ಕುಬೇರನ ದೂತನನ್ನು ಕತ್ತಿಯಿಂದ ಕಡಿದು ರಾಕ್ಷಸರಿಗೆ ತಿನ್ನುವಂತೆ ಹೇಳಿ ಪ್ರಯಾಣಕ್ಕೆ ಸನ್ನಾಹ ಮಾಡಿದನು. ಹೀಗೆ ರಾವಣನು ರಥವನ್ನೇರಿ ಮೂರು ಲೋಕಗಳನ್ನೂ ಜಯಿಸಲು ಹೊರಟನು.

ಅವನು ಮೊತ್ತಮೊದಲು ಕುಬೇರನ ಮೇಲೆಯೇ ದಾಳಿ ಮಾಡಲು ನಿಶ್ಚಯಿಸಿ, ಮಹೋದರ, ಪ್ರಹಸ್ತ,



ಮಾರೀಚ, ಶುಕ, ಸಾರಣ, ಧೂಮ್ರಾಕ್ಷ ಎಂಬ ಮಹಾ ಶೂರರಾದ ಆರು ಮಂತ್ರಿಗಳೊಂದಿಗೆ ಹೊರಟು ಬೇಗದಲ್ಲೇ ನದಿಗಳನ್ನೂ, ಬೆಟ್ಟಗಳನ್ನೂ, ವನಗಳನ್ನೂ ದಾಟಿ ಕೈಲಾಸ ಪರ್ವತವನ್ನು ತಲಪಿದನು. ಅಲ್ಲಿ ರಾವಣನೂ ಅವನ ಅನುಚರರೂ ಕುಳಿತುಕೊಂಡಿರುವುದನ್ನು ನೋಡಿ, ಹೀಗೆ ಬಂದವನು ಕುಬೇರನ ತಮ್ಮನೆಂದು ತಿಳಿದು ಯಕ್ಷರು ಭಯಪಡುತ್ತ ಓಡಿಹೋಗಿ ಕುಬೇರನೊಂದಿಗೆ ಆ ಸಂಗತಿ ಹೇಳಿದರು.

ಕೂಡಲೇ ಕುಬೇರನು ತನ್ನ ಯಕ್ಷರನ್ನು ರಾವಣನ ಮೇಲೆ ಕಳುಹಿಸುತ್ತ ಯುದ್ಧಮಾಡಲು ಅಪ್ಪಣೆ ಕೊಟ್ಟನು. ಅಸಂಖ್ಯಾಕರಾದ ಯಕ್ಷರು ಬಂದು ರಾವಣನನ್ನೂ, ಅವನ ಮಂತ್ರಿಗಳನ್ನೂ ಮುತ್ತಿ ಯುದ್ಧ ಪ್ರಾರಂಭ ಮಾಡಿದರು. ರಾವಣನ ಪ್ರತಿಯೊಬ್ಬ ಮಂತ್ರಿಯೂ ಸಾವಿರ ಸಾವಿರ ಮಂದಿ ಯಕ್ಷರೊಂದಿಗೆ ಯುದ್ಧ ಮಾಡಿದರು. ರಾವಣನು

ಒಣಹುಲ್ಲನ್ನು ಅಗ್ನಿ ದಹಿಸಿದಂತೆ ಯಕ್ಷರನ್ನೆಲ್ಲಾ ನಿರ್ಮೂಲ ಮಾಡಿಬಿಟ್ಟನು. ಈ ಯುದ್ಧದಲ್ಲಿ ಸತ್ತ ಯಕ್ಷರನ್ನುಳಿದವರು ಯುದ್ಧರಂಗದಿಂದ ಓಡಿ ಹೋದರು.

ಈ ಸಂಗತಿಯನ್ನು ಕೇಳಿ ಕುಬೇರನು ಮತ್ತೆ ಕೆಲವು ಸಾವಿರ ಮಂದಿ ಯಕ್ಷರನ್ನು ರಾವಣನ ಮೇಲೆ ಕಳುಹಿಸಿದನು. ಅವರಲ್ಲಿ ಸಂಯೋಧಕಂಟಕ ನೆಂಬವನು ಮಾರೀಚನ ಮೇಲೆ ಚಕ್ರಾಯುಧವನ್ನು ಪ್ರಯೋಗಿಸಿ ಬೆಟ್ಟದಿಂದ ಕೆಳಗೆ ಬೀಳುವಂತೆ ಹೊಡೆದನು. ಮಾರೀಚನು ಮತ್ತೆ ಎದ್ದು ಯುದ್ಧಕ್ಕೆ ಬರುವುದರೊಳಗೆ ಆ ಯಕ್ಷನು ಓಡಿಹೋದನು.

ಹಾಗೆಯೇ ಅಲಕಾ ನಗರದೊಳಗೆ ಪ್ರವೇಶಿಸದೆ ಅಡ್ಡವಾಗಿ ಓಡುತ್ತಿದ್ದ ಒಬ್ಬ ಯಕ್ಷನನ್ನು ರಾವಣನು ತೋರಣವನ್ನೆಳೆದು ಹೊಡೆದು ಕೊಂದುಬಿಟ್ಟನು. ಆಮೇಲೆ ಯಕ್ಷರೆಲ್ಲಾ ರಣರಂಗದಿಂದ ಹೆದರಿ ಓಡಿ ನದಿಗಳಲ್ಲಿಯೂ, ಗುಹೆಗಳಲ್ಲಿಯೂ ಅಡಗಿಕೊಂಡರು.

ತಾನು ಎರಡನೇ ಸಾರಿ ಕಳುಹಿಸಿದ ಯಕ್ಷರು ಕೂಡಾ ಸೋತುಹೋದ ಮೇಲೆ ಕುಬೇರನು ಮಾಣಿಭದ್ರನೆಂಬ ಮಹಾ ಯಕ್ಷನನ್ನು ರಾಕ್ಷಸರ ಮೇಲೆ ಕಳುಹಿಸಿದನು.

ಮಾಣಿಭದ್ರನು ನಾಲ್ಕು ಸಾವಿರ ಮಂದಿ ಯಕ್ಷರೊಂದಿಗೆ ಹೋಗಿ ಯುದ್ಧ ಮಾಡಿದನು. ಅವರೆಲ್ಲರೂ ಅನೇಕ ಆಯುಧಗಳಿಂದ ಎಡೆಬಿಡದೆ ಹೊಡೆಯುವಾಗ ರಾಕ್ಷಸರು ತಾಳಲಾರದೆ ಓಡತೊಡಗಿದರು. ಸ್ವಲ್ಪ ಹೊತ್ತು ಉಭಯ ಪಕ್ಷಗಳಿಗೂ ದೊಡ್ಡ ದೊಂಬಿಯುದ್ಧ ನಡೆಯಿತು. ಆ ದೊಂಬಿಯುದ್ಧದಲ್ಲಿ ಪ್ರಹಸ್ತನು ಸಾವಿರ ಮಂದಿ ಯಕ್ಷರನ್ನೂ, ಮಹೋದರನು ಮತ್ತೊಂದು ಸಾವಿರ ಯಕ್ಷರನ್ನೂ, ಮಾರೀಚನು ಎರಡು ಸಾವಿರ ಮಂದಿ ಯಕ್ಷರನ್ನೂ ಸಂಹರಿಸಿದರು. ಮಾಯೆ ತಿಳಿಯದ ಯಕ್ಷರು ರಾಕ್ಷಸರ ಮುಂದೆ ಹೇಗೆ ನಿಂತಾರು ?

ಆದರೂ ಮಾಣಿಭದ್ರನು ಭಾರಿ ದೊಡ್ಡ ಯುದ್ಧ ಮಾಡಿದನು. ಧೂಮ್ರಾಕ್ಷನು ಅವನನ್ನು ಮುಸಲಾಯುಧದಿಂದ ಎದೆಗೆ ಹೊಡೆದನು. ಆದರೂ ಮಾಣಿಭದ್ರನು ಚಲಿಸದೆ ತನ್ನ ಗದೆಯನ್ನು ಗಿರಗಿರ ತಿರುಗಿಸಿ ಹೊಡೆದಾಗ ಧೂಮ್ರಾಕ್ಷನು ಬಿದ್ದು ನೆಲ ಕಚ್ಚಿದನು. ಅದನ್ನು ನೋಡಿ ರಾವಣನೇ ಮಾಣಿಭದ್ರನ ಮೇಲೆ ಬಂದನು. ಮಾಣಿಭದ್ರನು ರಾವಣನ ಮೇಲೆ ಮೂರು ಶಕ್ತ್ಯಾಯುಧಗಳನ್ನು ಒಂದರ ಮೇಲೊಂದಾಗಿ ಪ್ರಯೋಗಿಸಲು, ರಾವಣನು ಲಕ್ಷ್ಯ ಮಾಡದೆ ಮಾಣಿಭದ್ರನ ನೆತ್ತಿಯ ಮೇಲೆ ಹೊಡೆದನು. ಆ ಪೆಟ್ಟಿಗೆ ಮಾಣಿಭದ್ರನ ಕಿರೀಟವು ಒಂದು ಬದಿಗೆ ಜಾರಿ ಹೋಯಿತು. ಅದರಿಂದ ಅವನಿಗೆ ಪಾರ್ಶ್ವಮೌಳಿ ಎಂಬ ಹೆಸರು ಬಂತು.





# ಜಗಳದ ಲಾಭ

ಒಂದು ಊರಿನಲ್ಲಿ ರಮಾಪತಿ ಎಂಬ ಯುವಕನು ಓದು ಕಲಿತು ಮುಗಿದ ಕೂಡಲೇ, ಮುಂಗ್ಲೀಪುರದ ಜಮೀನುದಾರರ ಕಚೇರಿಯಲ್ಲಿ ಒಳ್ಳೆಯ ಸಂಬಳದ ಮೇಲೆ ಉದ್ಯೋಗ ದೊರಕಿತು. ಆಗಲೇ ಮದುವೆಯಾಗಿದ್ದ ರಮಾಪತಿ, ತನ್ನ ಮಾವಯ್ಯನ ಗ್ರಾಮಕ್ಕೆ ಹೋಗಿ. ಹೆಂಡತಿ ಗಿರಿಜಳನ್ನು ಕರೆದುಕೊಂಡು ಬಂದು ಒಂದು ಬಾಡಿಗೆಯ ಮನೆಯಲ್ಲಿ ಹೊಸ ಸಂಸಾರ ಹೂಡಿ, ಉದ್ಯೋಗಕ್ಕೆ ಹೋಗಿಬರಲು ತೊಡಗಿದನು.

ಹಳ್ಳಿಯಲ್ಲಿ ಹುಟ್ಟಿ ಬೆಳೆದ ಗಿರಿಜಳಿಗೆ ಮುಂಗ್ಲೀಪುರದಂತಹ ಪಟ್ಟಣದ ಜೀವನವು ಸ್ವಲ್ಪ ಅಬ್ಬರವಾಗಿ ಕಾಣತೊಡಗಿತು. ಅವಳು ಹೊತ್ತಿಗೆ ಸರಿಯಾಗಿ ಅಡಿಗೆ ಕೆಲಸ ಮುಗಿಸಿ, ಗಂಡನಿಗೆ ಬಡಿಸಿ ಕಚೇರಿಗೆ ಕಳುಹಿಸಲು, ಎಷ್ಟು ಪ್ರಯತ್ನಿಸಿದರೂ ಸಾಧ್ಯವಾಗದೆ ಹೋಯಿತು. ಅದರಿಂದಾಗಿ ರಮಾಪತಿ ಒಂದೆರಡು ಬಾರಿ ತನ್ನ ಮೇಲಧಿಕಾರಿಗಳ ಬಾಯಿಗೆ ಬೀಳಬೇಕಾಗಿ ಬಂತು.

ಒಂದು ದಿನ ಸಾಯಂಕಾಲ ರಮಾಪತಿ ಕಚೇರಿಯಿಂದ ಮನೆಗೆ ಬಂದ ಕೂಡಲೇ ಹೆಂಡತಿಯೊಂದಿಗೆ, "ನೋಡು, ನೀನು ಅಡಿಗೇ ಕೆಲಸ ಹೇಗೆ ಮುಗಿಸುವಿಯೋ ಅದೆಲ್ಲಾ ನನಗೆ ಗೊತ್ತಿಲ್ಲ. ನಾಳೆಯಿಂದ ಮಾತ್ರ ನಾನು ಹೊತ್ತಿಗೆ ಸರಿಯಾಗಿ ಕಚೇರಿಯನ್ನು ತಲಪಲೇಬೇಕು. ನೆನಪಿಟ್ಟುಕೋ, ಜಾಗ್ರತೆ!" ಎಂದನು ಖಂಡಿತ ಸ್ವರದಲ್ಲಿ.

ಆ ದಿನ ರಾತ್ರಿ ಗಿರಿಜಳಿಗೆ ನಿದ್ದೆಯೇ ಬರಲಿಲ್ಲ. ಅವಳು ಅರ್ಧ ರಾತ್ರಿಯ ಹೊತ್ತಿಗೇ ಎದ್ದು ಅಡಿಗೆ ಕೆಲಸಕ್ಕೆ ಪ್ರಾರಂಭಮಾಡಿ, ಸಮಯಕ್ಕೆ ಸರಿಯಾಗಿ ರಮಾಪತಿಗೆ ಊಟ ಬಡಿಸಿ, ಕಚೇರಿಗೆ ಕಳುಹಿಸಿದಳು. ದೊಡ್ಡದೊಂದು ಗಂಡದಿಂದ ತಪ್ಪಿಸಿಕೊಂಡಂತಾಯಿತು ಅವಳಿಗೆ.

ರಮಾಪತಿ ಮನೆಯಿಂದ ಹೊರಟು ಬೀದಿಯಲ್ಲಿ ಆ ಕಡೆಗೆ ತಿರುಗಿದಾಗ, ಯಾವನೋ ಅಪರಿಚಿತನೊಬ್ಬನು ತಟ್ಟನೆ ಅವನ ಕೈಯನ್ನು ಹಿಡಿದು, "ಎಲ! ಎರಡು ವರ್ಷಗಳ ಮೇಲೆ ಅಕಸ್ಮಾತ್ತಾಗಿ ಇಲ್ಲಿ ಕಲೆತುಕೊಂಡೆವು. ನನಗೆ ಈ ದಿನ ದೊಡ್ಡ ಹಬ್ಬದಂತಾಯಿತು!" ಎಂದನು ನಗುತ್ತ.

ರಮಾಪತಿ ಕ್ಷಣಕಾಲ ಬೆರಗಾಗಿ "ಅಪಾರ್ಥ ಮಾಡಿಕೊಳ್ಳಬೇಡಿ. ನೀವು ಯಾರೆಂಬುದೇ ನನಗೆ

ಎಂ. ಕೆ. ಈಶ್ವರರಾವ್



ಗೊತ್ತಾಗಲಿಲ್ಲ!" ಎಂದನು. ಅದಕ್ಕೆ ಆ ಮನುಷ್ಯನು ದೊಡ್ಡ ದನಿಯಿಂದ ನಕ್ಕು "ಓ! ನಾನು ಮದುವೆಗೆ ಬರಲಿಲ್ಲವೆಂಬ ಕೋಪ ಇನ್ನೂ ಹೋಗಲಿಲ್ಲ ಅಂತ ಕಾಣುತ್ತೆ. ಕೆಲಸದ ಒತ್ತಡದಿಂದಾಗಿ ಬರಲಾಗಲಿಲ್ಲವೆಂದು ಆಗಲೇ ಬರೆದಿದ್ದೆನಲ್ಲಾ ವೀರಣ್ಣಾ!" ಎಂದನು.

ರಮಾಪತಿ ಆಶ್ಚರ್ಯಪಡುತ್ತ "ನನ್ನ ಹೆಸರು ರಮಾಪತಿ, ವೀರಣ್ಣನಲ್ಲ! ನಾನು ಬೇಗನೇ ಹೋಗಬೇಕು" ಎಂದು ರಮಾಪತಿ ಕೈಯನ್ನು ಬಿಡಿಸಿಕೊಳ್ಳಲು ನೋಡಿದನು.

ಆಗ ಆ ಹೊಸಬನು ರಮಾಪತಿಯ ಕೈಯನ್ನು ಇನ್ನಿಷ್ಟು ಗಟ್ಟಿಯಾಗಿ ಹಿಡಿದು, "ನೀನು ವೀರಣ್ಣನಲ್ಲವೆಂದು ದಭಾಯಿಸಿದರೂ ನಿನ್ನ ಬಲದ ಅಂಗೈಯ ಹಿಂಬದಿಯಲ್ಲಿರುವ ಹುಟ್ಟು ಮಚ್ಚೆಯ ಸಾಕ್ಷ್ಯ ಎಲ್ಲಿಗೆ ಹೋದೀತು!" ಎಂದನು ನಗುತ್ತ. ರಮಾಪತಿ ಬೇಸರದಿಂದ, "ಅಯ್ಯಾ, ನನ್ನ ಎಡಗೈಯ ಕಿರಿ ಬೆರಳಿನಲ್ಲಿ ಹೊರತು ಮತ್ತೆಲ್ಲಿಯೂ ಹುಟ್ಟು ಮಚ್ಚೆ ಇಲ್ಲ. ಇನ್ನು ಬಿಟ್ಟುಬಿಡಿ ನನ್ನನ್ನು! ಹೊತ್ತಾಯಿತು!" ಎಂದನು.

ಇಷ್ಟು ನಡೆದ ಮೇಲೆ ಆ ಹೊಸಬನು ರಮಾಪತಿಯ ಕೈಯನ್ನು ಬಿಟ್ಟು, "ಕ್ಷಮಿಸಿರಿ. ನನ್ನ ಸ್ನೇಹಿತ ವೀರಣ್ಣನೆಂದುಕೊಂಡು ನಿಮಗೆ ಬಹಳ ತೊಂದರೆ ಕೊಟ್ಟೆ. ಅವನಿಗೂ ನಿಮಗೂ ಎಳ್ಳಿನಷ್ಟು ಕೂಡಾ ವ್ಯತ್ಯಾಸವಿಲ್ಲ" ಎಂದನು.

ರಮಾಪತಿ ಕಚೇರಿಗೆ ಹೋಗಿ ಸಾಯಂಕಾಲದಲ್ಲಿ ಮನೆಗೆ ಹಿಂದಿರುಗಿದ ಕೂಡಲೇ ಗಿರಿಜೆ, "ಈ ದಿನ ಸರಿಯಾದ ಹೊತ್ತಿಗೆ ಕಚೇರಿಗೆ ಹೋಗಿ ಸೇರಿದಿರಾ?" ಎಂದು ಕೇಳಿದಳು.

"ಅದೇನೂ ಇಲ್ಲ. ಇಲ್ಲಿಂದ ಹೊರಟು ಬೀದಿಯಲ್ಲಿ ಆಚೆಗೆ ತಿರುಗಿದ ಕೂಡಲೇ ಯಾವನೋ ಒಬ್ಬ ಕಳ್ಳನ ಹಾಗೆ ನನ್ನ ಕೈಹಿಡಿದು ನಿಲ್ಲಿಸಿದ" ಎಂದು ರಮಾಪತಿ ಬೆಳಿಗ್ಗೆ ನಡೆದ ಸಂಗತಿಯನ್ನು ವಿವರವಾಗಿ ಹೇಳಿದನು.

ಗಂಡನ ಮಾತಿನಲ್ಲಿ ವೀರಣ್ಣನೆಂಬ ಹೆಸರನ್ನು ಕೇಳಿದ ಗಿರಿಜೆ, "ಅದೇ ಹೇಳಲಿಕ್ಕೆ ಮರೆತೆ. ಮಧ್ಯಾಹ್ನದ ಸಮಯಕ್ಕೆ ನಿಮ್ಮ ಚಿಕ್ಕಂದಿನ ಸ್ನೇಹಿತ ವೀರಣ್ಣನೆಂಬವನು ಇಲ್ಲಿಗೆ ಬಂದ" ಎಂದಳು.

ಅದನ್ನು ಕೇಳಿ ರಮಾಪತಿ ಬೆಚ್ಚಿಬಿದ್ದು, "ಅಂಥ ಹೆಸರಿನ ಸ್ನೇಹಿತ ನನಗೆ ಯಾರೂ ಇಲ್ಲ! ಹಾಗಾದರೆ ಈಗ ಅವನು ಎಲ್ಲಿದ್ದಾನೆ?" ಎಂದು ಕೇಳಿದನು.

"ಪ್ರಯಾಣದ ಬಳಲಿಕೆ ತುಂಬಾ ಆಗಿದೆ ಎನ್ನುತ್ತ ಪೆಟ್ಟಿಗೆಯನ್ನು ನಮ್ಮ ಕೋಣೆಯಲ್ಲಿಟ್ಟು, ಊಟವಾದ ಮೇಲೆ ಮಲಗಿದ್ದನು. ಈಗ ಸ್ವಲ್ಪಹೊತ್ತಿನ ಮುಂಚೆ ಪೇಟೆಯವರೆಗೆ ಹೋಗಿ ಬರುತ್ತೇನೆಂದು ಹೇಳಿ ಹೋದನು" ಎಂದು ಹೇಳಿದಳು ಗಿರಿಜೆ. ರಮಾಪತಿಗೆ ಕೂಡಲೇ ಅನುಮಾನ ಬಂದಿತು.

ಅವನು ಬೇಗಬೇಗನೆ ಹೋಗಿ, ವೀರಣ್ಣನೆಂದು ಹೇಳಿದವನ ಪೆಟ್ಟಿಗೆಯನ್ನು ತೆರೆದು ನೋಡಿದನು. ಅದರಲ್ಲಿ ನಾಲ್ಕಾರು ಇಟ್ಟಿಗೆ ಕಲ್ಲುಗಳಿದ್ದುವು.

"ಇವನಾವನೋ ದೊಡ್ಡ ಮೋಸಗಾರ! ನೋಡೇ! ಮನೆಯೊಳಗಿನಿಂದ ಏನಾದರೂ ಎತ್ತಿಕೊಂಡು ಹೋಗಿರಬೇಕು. ನೋಡು! ನೋಡು!" ಎಂದು ಕೂಗಿ ಹೇಳಿದನು ರಮಾಪತಿ,

ಇಬ್ಬರೂ ಕೂಡಿ ಕೋಣೆಯೊಳಗಿನ ಪೆಟ್ಟಿಗೆಗಳನ್ನೆಲ್ಲಾ ಹುಡುಕುವಾಗ, ಒಂದು ಪೆಟ್ಟಿಗೆಯಲ್ಲಿ ಇರಬೇಕಾಗಿದ್ದ ನಾನ್ನೂರು ರೂಪಾಯಿ ಮತ್ತು ಗಿರಿಜೆಯ ಒಂದು ಜತೆ ಬಳೆಯೂ ಕಾಣಲಿಲ್ಲ.

ರಮಾಪತಿ ತುಂಬಿದ ಕೋಪದಿಂದ ಹೆಂಡತಿಯನ್ನು ನೋಡಿ, "ನೀನು ಬರೀ ಹಳ್ಳಿಯ ಮೊದ್ದು ಮುಂಡೆಯವಳೆಂದು ನಿರೂಪಣವಾಯಿತು. ಯಾವನೋ ಮೂಗು ಮೋರೆ ತಿಳಿಯದವನು ಹೇಳಿದ್ದು ನಂಬಿ, ಅವನಿಗೆ ಊಟ ಉಪಚಾರ ಮಾಡಿ ಕೋಣೆಯಲ್ಲಿ ಮಲಗಲು ಬಿಡುವುದುಂಟೇ! ಛೀ! ನಿನ್ನ ಬುದ್ಧಿಗೆ!" ಎಂದು ಸಿಡಿಮಿಡಿಕಾರಿದನು.

ಅವಳೂ ಬಿಡದೆ, "ಅವನು ಮೋಸಗಾರನೆಂದು ನನಗೇನು ಗೊತ್ತು? ಮಾತಿನ ಸಂದರ್ಭದಲ್ಲಿ ನಿಮ್ಮ ಕಿರಿ ಬೆರಳಿನಲ್ಲಿ ಮಚ್ಚೆ ಇರುವ ಸಂಗತಿ ಹೇಳಿದ. ನೀವು ಹಾಕಿಕೊಂಡಿದ್ದ ಹವಳದ ಉಂಗುರವನ್ನೂ ವರ್ಣಿಸಿದ. ಆದ್ದರಿಂದಲೇ ನಾನು ನಂಬಿದೆ" ಎಂದಳು ಗದ್ಗದ ಸ್ವರದಿಂದ.

"ಓಹೋ! ಸಂದೇಹವಿಲ್ಲ. ಬೆಳಿಗ್ಗೆ ನನ್ನ ಕೈ ಹಿಡಿದು ಬುದ್ಧಿವಂತಿಕೆಯಿಂದ ನನ್ನ ವಿವರಗಳನ್ನು ತಿಳಿದುಕೊಂಡವನೇ ಈ ಕಳ್ಳ! ಮಹಾ ವಂಚಕ!" ಎಂದನು ರಮಾಪತಿ.

"ಹೌದು ಹೌದು. ಅವನೇ! ಅವನ ಕೈಯಿಂದ ಬಿಡಿಸಿಕೊಳ್ಳುವ ಆತುರದಲ್ಲಿ ನಿಮ್ಮ ಸಂಗತಿಯನ್ನೆಲ್ಲ ಅವನಿಗೆ ಹೇಳಿಬಿಟ್ಟಿದ್ದೀರಿ. ನಾನಂತೂ ಹಳ್ಳೀ ಮೊದ್ದು ಮುಂಡೆಯಾದರೆ, ನಿಮ್ಮ ಪಟ್ಟಣವಾಸದ ಬುದ್ಧಿಶಾಲಿತನವು ನನಗೆ ಸರಿಯಾಗಿಯೇ ಇದೆ ಅನ್ನಿ! ಅದಕ್ಕೇ ನಮ್ಮೊಳಗೆ ಬ್ರಹ್ಮಗಂಟು ಬಿದ್ದದ್ದು!" ಎಂದು





ರಮಾಪತಿ ಗಿರಿಜೆಯನ್ನು ನಾರಾಯಣನಿಗೆ ತೋರಿಸುತ್ತ, "ಇವಳನ್ನು ನೀವು ನನಗೆ ಗಂಟು ಹಾಕುವಾಗ ಮೂರು ಸುಳ್ಳು ಹೇಳಿದಿರಿ!" ಎಂದನು.

"ಏನು ಆ ಮೂರು ಸುಳ್ಳು?" ಎಂದು ಕೇಳಿದನು ನಾರಾಯಣ. "ಹುಡುಗಿ ಚುರುಕಾಗಿದ್ದಾಳೆ. ಬುದ್ಧಿವಂತೆ, ವಿನಯ ವಿಧೇಯತೆಯುಳ್ಳವಳು ಎಂದು ಹೇಳಿದ್ದೀರಿ. ಬೆಳಿಗ್ಗೆ ಮೂರುಮಾರು ಹೊತ್ತೇರಿದರೂ ಒಂದು ಅಡಿಗೆ ಮುಗಿಸುವುದಿಲ್ಲ ಇವಳು. ಇವಳ ಚುರುಕುತನವೆಂಥದೋ ನನಗೆ ಗೊತ್ತಾಗುವುದಿಲ್ಲ. ಮೋಸಗಾರನೊಬ್ಬನಿಗೆ ಮಲಗಲು ಜಾಗಕೊಟ್ಟು ಅವನು ಕದ್ದುಕೊಂಡು ಹೋಗಲು ಎಡೆಮಾಡಿಕೊಟ್ಟಿದ್ದಾಳೆ. ಇದು ಎಂತಹ ಬುದ್ಧಿವಂತಿಕೆ? ಗಂಡನಾಗಿರುವ ನನ್ನನ್ನೇ ಮಾತಿನಿಂದ ತಿವಿದಾಡುವವಳು ಎಂತಹ ವಿನಯಶೀಲೆ? ಎಂತಹ ವಿಧೇಯಳು? ನೀವೇ ಬಿಡಿಸಿ ಹೇಳಿರಿ ನೋಡುವಾ!" ಎಂದನು ರಮಾಪತಿ.

ಗಿರಿಜೆ ಕಣ್ಣೀರು ಸುರಿಸುತ್ತಾ ನಡೆದ ಸಂಗತಿಯನ್ನೆಲ್ಲಾ ನಾರಾಯಣನೊಂದಿಗೆ ಹೇಳಿದಳು. ಅದನ್ನೆಲ್ಲಾ ಕೇಳಿದ ನಾರಾಯಣನು ಸಣ್ಣದೊಂದು ಚಿಟಿಕೆ ಹೊಡೆದು, "ತಪ್ಪು ನಿಮ್ಮಿಬ್ಬರಲ್ಲಿ ಯಾರದೂ ಅಲ್ಲ. ಇಂತಹ ಮೋಸ ನಡೆಯಲು ಮೂಲ ಕಾರಣ ಮನೆಯಲ್ಲಿ ಹಿರಿಯರೆಂದು ಯಾರೂ ಇಲ್ಲದ್ದೇ. ಮೂರನೆಯವರೊಬ್ಬರು ಬೇಕು. ಆ ಕೊರತೆ ನಾನು ತೀರಿಸಿಬಿಡುತ್ತೇನೆ. ಸರಿತಾನೇ? ಅಮ್ಮಾ, ಇನ್ನು ನೀನು ದಿನಾ ಎಸರಿನಲ್ಲಿ ಇನ್ನೊಂದು ಮುಷ್ಟಿ ಅಕ್ಕಿ ಹೆಚ್ಚಿಗೆ ಹಾಕಿಬಿಡು" ಎಂದು ಹೇಳಿ ಸ್ನಾನಮಾಡಲು ಬಾವಿಕಟ್ಟೆಗೆ ಹೋದನು.

ಅನಂತರ ಹದಿನೈದು ದಿನಗಳ ಮೇಲೆ ರಮಾಪತಿ ಹೆಂಡತಿಯೊಡನೆ, "ಇನ್ನೆಷ್ಟು ದಿನ ಇರುತ್ತಾನೆ ನಿನ್ನ ಬಂಧು ನಾರಾಯಣ?" ಎಂದು ಕೇಳಿದನು.

ಇದಿರೇಟು ಕೊಟ್ಟು ಹೇಳಿ ತೀರಿಸಿದಳು ಗಿರಿಜೆ. ಹಾಗೆ ಹೆಂಡತಿ ಹೇಳಿದ್ದು ಕೇಳಿ, ರಮಾಪತಿಗೆ ಇನ್ನಷ್ಟು ಸಿಟ್ಟು ಬಂತು. ಗಿರಿಜೆಯೂ ಬಿಡಲಿಲ್ಲ. ಪರಸ್ಪರ ತಪ್ಪು ಹೇಳಿಕೊಂಡು ಸ್ವಲ್ಪ ಹೊತ್ತು ಹೋರಾಡಿದರು. ಇಬ್ಬರೂ ರಾತ್ರಿ, ಊಟ ಸಹಾ ಮಾಡದೆ ಮಲಗಿದರು.

ಮರುದಿನ ಬೆಳಿಗ್ಗೆ ರಮಾಪತಿ ಪಕ್ಕದ ಊರಿಗೆ ಹೋಗಿ ನಾರಾಯಣನೆಂಬವನನ್ನು ತನ್ನೊಂದಿಗೆ ಕರೆದುಕೊಂಡು ಬಂದನು. ಈ ನಾರಾಯಣನು ಗಿರಿಜೆಗೆ ದೂರದ ಬಂಧುವಾಗುತ್ತಾನೆ. ಬ್ರಹ್ಮಚಾರಿಯಾದ ಅವನೇ ಗಿರಿಜಾ ರಮಾಪತಿಯರ ಮದುವೆಗೆ ಮಧ್ಯಸ್ಥನಾಗಿ ಕೆಲಸ ಮಾಡಿದವನು. ಅವನಿಗೆ ಯಾವ ಬಂಧನವೂ ಇರಲಿಲ್ಲ. ಬೇಕಾದವರಿಗೆ ಮದುವೆಯ ಸಂಬಂಧಗಳನ್ನು ಕುದುರಿಸಿಕೊಟ್ಟು, ಅವರ ಮನೆಯಲ್ಲಿಯೇ ತಿಂದುಣ್ಣುತ್ತ ಕಾಲ ಕಳೆಯುವ ಮಹಾನುಭಾವನು ನಾರಾಯಣ.

"ನನಗೇನು ಗೊತ್ತು ? ಅವನನ್ನು ಕರೆದುಕೊಂಡು ಬಂದವರು ನೀವು. ಕಳುಹಿಸಿಬಿಡುವ ಭಾರ ಕೂಡಾ ನಿಮ್ಮದೇ " ಎಂದಳು ಗಿರಿಜೆ ಕಡ್ಡಿ ಮುರಿದ ಹಾಗೆ.

ಶನಿಗ್ರಹದ ಹಾಗೆ ಮನೆಯಲ್ಲಿ ಸೇರಿದ ನಾರಾಯಣನು ಹೋಗುವಂತೆ ಮಾಡಲು ಏನು ಉಪಾಯವೆಂದು ರಮಾಪತಿ ಬಹಳ ಆಲೋಚನೆ ಮಾಡಿದನು. ಅವನಿಗೆ ಒಂದು ಉಪಾಯ ತೋರಿತು.

ರಮಾಪತಿಗೆ ಒಬ್ಬಳು ದೊಡ್ಡಮ್ಮಳಿದ್ದಳು. ಐದಾರು ವರ್ಷಗಳ ಕೆಳಗೆ ಆಕೆಯ ಗಂಡ ತೀರಿಹೋಗುವ ಮೊದಲು, ಒಬ್ಬಳೇ ಒಬ್ಬಳು ಮಗಳ ಮದುವೆಯ ಬಾಧ್ಯತೆಯನ್ನು ರಮಾಪತಿಗೆ ಕೊಟ್ಟಿದ್ದನು. ಅವಳ ಹೆಸರು ಸುಕುಮಾರಿಯಾದರೂ, ಕುರೂಪಿ ಮಾತ್ರವಲ್ಲದೆ ವಾಚಾಳಿಯೂ ಆಗಿದ್ದಳು. ಆದುದರಿಂದ ಮದುವೆಯಾಗಲು ಯಾರೂ ಮುಂದೆ ಬರಲಿಲ್ಲ. ಈಗ ಅವಳಿಗೆ ಮೂವತ್ತು ವರ್ಷ ವಯಸ್ಸಾಗಿದೆ. ಈ ವಿಷಯವನ್ನು ನೆನಪಿಗೆ ತಂದುಕೊಂಡು ರಮಾಪತಿ ಒಂದುದಿನ ಕಚೇರಿಯಿಂದ ಬಂದ ಕೂಡಲೇ, ನಾರಾಯಣನನ್ನು ಕರೆದು, ತನ್ನ ದೊಡ್ಡಮ್ಮನ ಮಗಳ ಸಂಗತಿಯನ್ನು ಅವನೊಂದಿಗೆ ಹೇಳಿ, "ಆಕೆಗೆ ಮದುವೆಯ ವಯಸ್ಸು ಮೀರಿದ್ದರೂ, ತಕ್ಕ ಸಂಬಂಧ ನೀವೇ ನೋಡಬೇಕು. ಒಳ್ಳೆಯ ಸಂಬಂಧವನ್ನೇ ನೋಡಿದರೆ ನಿಮ್ಮ ಉಪಕಾರ ಮರೆಯಲಾರೆನು " ಎಂದನು.

ನಾರಾಯಣನು ಅದಕ್ಕೆ ಒಪ್ಪಿಕೊಂಡು ಮರು ದಿನವೇ ಅಲ್ಲಿಂದ ಹೊರಟುಹೋದನು. ಅದನ್ನು ನೋಡಿ ರಮಾಪತಿಗೂ ಗಿರಿಜೆಗೂ ಬಹಳ ಸಂತೋಷವಾಯಿತು. ಆ ವಾಚಾಳತನದ ಕುರೂಪಿಣಿಗೆ ಸಂಬಂಧ ನೋಡುವ ಕೆಲಸ ಈ ವರ್ಷದಲ್ಲಿ ಆಗುವಂಥಾದಲ್ಲವೆಂದು ಅಂದುಕೊಂಡಿದ್ದರು.

ಆದರೆ ಮೂರನೆ ದಿನದ ಬೆಳಿಗ್ಗೆ ನಾರಾಯಣನು ಒಂದು ಬಾಡಿಗೆಯ ಗಾಡಿಯಲ್ಲಿ ರಮಾಪತಿಯ ಮನೆಯ ಮುಂದೆ ಇಳಿದುದನ್ನು ನೋಡಿ ಗಂಡಹೆಂಡಿರು ಮುಖ ಬಾಡಿಸಿಕೊಂಡು ಸಪ್ಪಗಾಗಿ ಹೋದರು. "ಎಲ ! ಇಷ್ಟು ಬೇಗದಲ್ಲಿ ನಮ್ಮ



ದೊಡ್ಡಮ್ಮನ ಮಗಳು ಸುಕುಮಾರಿಗೆ ಸಂಬಂಧ ದೊರಕಿಬಿಟ್ಟಿತೆ ?" ಎಂದು ಕೇಳಿದನು ರಮಾಪತಿ.

"ಆಹಾ ! ನಾನು ಹೊರಟರೆ ಕೆಲಸ ಸಾಧಿಸದೆ ಬಿಡುತ್ತೇನೇನು ? ಯಾರು ವರನೆಂದು ಕೇಳಿರಲ್ಲ ?" ಎಂದನು ನಾರಾಯಣ ಉತ್ಸಾಹದಿಂದ.

"ನಮಗೇನು ಗೊತ್ತು ? ನೀವೇ ಹೇಳಬೇಕು" ಎಂದನು ರಮಾಪತಿ.

"ಈ ನಾರಾಯಣನೇ !" ಎಂದು ನಾರಾಯಣನು ದೊಡ್ಡ ದನಿಯಿಂದ ನಕ್ಕು, "ಸುಕುಮಾರಿಗೆ ನಾನು ಓಡಿಸಿದೆನು. ನನಗೆ ಸುಕುಮಾರಿ ಓಡಿಸಿದಳು. ಇನ್ನು ಬೇರೆ ಸಂಬಂಧ ಹುಡುಕುವ ಕಷ್ಟವೇಕೆ ? ನೀವೇ ಯಾಕೆ ಇವಳನ್ನು ಮಾಡಿಕೊಳ್ಳಬಾರದು ? ಎಂದರು ನಿಮ್ಮ ದೊಡ್ಡಮ್ಮ. ಇದೇ ಬರುವ ಬುಧವಾರದಂದು ಮುಹೂರ್ತ. ಈ ಶುಭ ವಾರ್ತೆಯನ್ನು ನಿಮ್ಮ ಕಿವಿಗೆ ಹಾಕಿ ನಮ್ಮ ಮದುವೆಗೆ ಆಹ್ವಾನಿಸಲಿಕ್ಕಾಗಿಯೇ ಬಂದೆನು. ಅದರೊಂದಿಗೆ ನಿಮಗೊಂದು ಮುಖ್ಯ ವಿಷಯ ಕೂಡಾ ಹೇಳಬೇಕೆಂದಿದ್ದೇನೆ" ಎಂದನು ನಾರಾಯಣ.

"ಏನದು ?" ಎಂದು ಗಿರಿಜೆಯೂ ರಮಾಪತಿಯೂ ಒಟ್ಟಿಗೇ ಕೇಳಿದರು.

"ಇಬ್ಬರ ನ್ಯಾಯ ಮೂರನೇಯವನಿಗೆ ಆದಾಯವೆಂಬುದೊಂದು ಸಾಮತಿ. ನೀವಿಬ್ಬರು ಗಂಡ ಹೆಂಡಿರ ಜಗಳದಲ್ಲಿ ನನಗೆ ಹೇಗೆ ಲಾಭವಾಯಿತೆಂದು ನೋಡಿದಿರಾ ?" ಎಂದನು ನಾರಾಯಣ.

ರಮಾಪತಿಯೂ, ಗಿರಿಜೆಯೂ ಏನೂ ಹೇಳದೆ ಸುಮ್ಮನಿದ್ದರು. ಆಗ ನಾರಾಯಣನು ನಗುತ್ತ, "ಗಂಡಹೆಂಡಿರೆಂದಮೇಲೆ ಆಗಾಗ ಹೀಗೆ ಜಗಳ ಬರುವುದು ಸಹಜವೇ. ಅವುಗಳನ್ನು ಮೂರನೇಯವನ ಪ್ರವೇಶವಿಲ್ಲದೆ ಅವರವರೇ ಸರಿಪಡಿಸಿಕೊಳ್ಳುವುದು ಜಾಣತನ. ಹಾಗಿಲ್ಲದಿದ್ದರೆ ನನ್ನಂಥವನು ಬಂದು ಮನೆ ಹಿಡಿದು ಬೇರುಬಿಟ್ಟಾನು. ಅವನಿಗೆ ನಿಮ್ಮ ಜಗಳ ತೀರಿಸುವುದಕ್ಕಿಂತಲೂ, ಉಚಿತ ವಸತಿ ಊಟಗಳು ಲಾಭವಾಗಿಬಿಡುತ್ತವೆ. ಮುಚ್ಚುಮರೆ ಮಾಡಲೇಕೆ ? ನಿಮ್ಮ ಹಾಗು ನನ್ನ ಅದೃಷ್ಟವಶದಿಂದ ಈ ಮದುವೆ ನಿಶ್ಚಯವಾಯಿತೆಂದುಕೊಳ್ಳಿ. ಇಲ್ಲದಿದ್ದರೆ ನಾನು ನಿಮ್ಮ ಮನೆ ಬಿಡುತ್ತಿದ್ದಿಲ್ಲ. ನೀವು ಮುಲಾಜಿಲ್ಲದೆ ಹೊರದೂಡಬೇಕಿತ್ತು. ನನಗೂ ಈ ಪ್ರಾಯದಲ್ಲಿ ತಕ್ಕ ಹೆಣ್ಣು ಸುಕುಮಾರಿಯೇ ಅನಿಸಿತು" ಎಂದು ಇನ್ನಷ್ಟು ನಕ್ಕನು.

"ನೀವು ನಮಗೂ ಬುದ್ಧಿ ಕಲಿಸಿದಿರಿ !" ಎಂದರು ಗಿರಿಜಾ ರಮಾಪತಿಯರು ಸಪ್ಪಗಿನ ನಗುವನ್ನು ತಂದುಕೊಂಡು. ಆಮೇಲೆ ನಿಧಾನವಾಗಿ ಒಳ್ಳೆಯ ಪರಿಣಾಮವಾಯಿತೆಂದು ಸಂತೋಷಪಟ್ಟರು.





# ವಿಚಿತ್ರ ವೀಲುನಾಮೆ

**ಒಂ**ದು ಕಾಲದಲ್ಲಿ ಜೆರೂಸಲೇಮ್ ನಗರದಲ್ಲಿ ಒಬ್ಬ ವರ್ತಕನಿದ್ದನು. ಅವನಿಗೆ ಒಬ್ಬನೇ ಒಬ್ಬ ಮಗ. ವರ್ತಕನು ವ್ಯಾಪಾರದಲ್ಲೇ ಇರುತ್ತ, ಬಹಳ ಮಟ್ಟಿಗೆ ದೂರದೂರದ ದೇಶಗಳಲ್ಲಿ ತಿರುಗಿಕೊಂಡಿರುವನು. ಆದುದರಿಂದ ಅವನ ಮಗನು ಓದುಬರೆಹ ಕಲಿಯುತ್ತಾ ಮನೆಯಲ್ಲಿದ್ದನು. ಅವನ ತಂದೆಯೊಂದಿಗೆ ಯಾವಾಗಲೂ ಇರುವವನು ಒಬ್ಬ ಗುಲಾಮನು. ತಂದೆ ಆ ಗುಲಾಮನನ್ನು ತಾನು ಎಲ್ಲಿಗೆ ಹೋದರೂ ಕರೆದುಕೊಂಡು ಹೋಗುವನು.

ಒಂದು ಸಾರಿ ವರ್ತಕನು ದೂರ ದೇತದಲ್ಲಿರುವಾಗ ಅವನಿಗೆ ಕಾಯಿಲೆ ಬಂದಿತು. ತನಗೆ ಮರಣ ಕಾಲ ಬಂದಿತೆಂದುಕೊಂಡು ವರ್ತಕನು ತನ್ನ ಮಗನನ್ನು ನೆನೆದು ಆಂದೋಳನೆಪಡತೊಡಗಿದನು. ಮಗನು ಇನ್ನೂ ಚಿಕ್ಕ ಹುಡುಗ. ತನ್ನ ಸೊತ್ತು ಪರರ ಪಾಲಾಗದಂತೆ ಆಸ್ತಿಯನ್ನೆಲ್ಲಾ ಮಗನ ಹೆಸರಿಗೆ ಬರೆದರೆ, ತನ್ನ ಗುಲಾಮನು ಸುಲಭವಾಗಿ ಅನ್ಯಾಕ್ರಾಂತ ಮಾಡಿ ಮಗನಿಗೆ ಏನೂ ಉಳಿಯದಂತೆ ಮಾಡಬಹುದು. ಅವನಿಗೆ ಹಾಗೆ ಮಾಡಲು ಸಾಧ್ಯವಾಗದಂತೆ ಹೇಗೆ ವೀಲುನಾಮೆ ಬರೆಯುವುದೆಂದು ದೀರ್ಘವಾಗಿ ಯೋಚಿಸಿ ಕಡೆಗೆ ಅವನು ಒಂದು ನಿಶ್ಚಯಕ್ಕೆ ಬಂದನು.

ಅವನು ತನ್ನ ವೀಲುನಾಮೆ ಬರೆಯಲು ಒಬ್ಬ ಲೇಖಕನನ್ನು ಕರೆದುಕೊಂಡು ಬರುವಂತೆ ಗುಲಾಮನನ್ನು ನಗರದೊಳಗೆ ಕಳುಹಿಸಿದನು. ಸೂಕ್ಷ್ಮ ಪದಗಳಿಂದ ವಾಗ್ಮೂಲಗಳನ್ನು ಬರೆಯಬಲ್ಲವನಾದ ಲೇಖಕನೊಬ್ಬನು ಬಂದು, ವರ್ತಕನು ಹೇಳಿದ ಪ್ರಕಾರ ಅವನು ವೀಲುನಾಮೆ ಬರೆದನು. ಆ ವೀಲುನಾಮೆಯ ಮೂಲಕ ವರ್ತಕನು ತನ್ನ ಸ್ವದೇಶ ವಿದೇಶಗಳ ಯಾವತ್ತೂ ಆಸ್ತಿಯನ್ನು ಆ ಗುಲಾಮನಿಗೆ ಒಪ್ಪಿಸಿ, ಆ ಆಸ್ತಿಯಲ್ಲಿ ಯಾವುದೋ ಒಂದು ಮಾತ್ರವೇ ವರ್ತಕನ ಮಗನು ಪಡೆಯಬಹುದೆಂದು ಹೇಳಿ ಬರೆಯಿಸಿದ್ದನು.

ಮುಂದೆ ಬೇಗದಲ್ಲೇ ವರ್ತಕನಿಗೆ ಕಾಯಿಲೆ ಜೋರಾಗಿ ಸತ್ತುಹೋದನು. ಅವನ ಗುಲಾಮನು ಆ ವೀಲುನಾಮೆಯನ್ನು ತೆಗೆದುಕೊಂಡು ವರ್ತಕನು ಸಂಪಾದಿಸಿದ ಧನದೊಂದಿಗೆ ಜೆರೂಸಲೇಮ್ ನಗರಕ್ಕೆ ಹಿಂದಿರುಗಿ ಬಂದನು. ಅವನು ತನ್ನ ಹತ್ತಿರವಿದ್ದ ವೀಲುನಾಮೆಯ ಪ್ರಕಾರ ವರ್ತಕನ

ಯಹೂದ್ಯ ಜಾನಪದ ಕಥೆ

ಯಾವತ್ತೂ ಆಸ್ತಿಯನ್ನು ಸ್ವಾಧೀನಪಡಿಸಿಕೊಂಡದ್ದೂ ಆಯಿತು. ತನ್ನ ತಂದೆ ಸತ್ತುದರ ಪರಿಣಾಮ ಹೀಗಾದುದನ್ನು ನೋಡಿ ವರ್ತಕನ ಮಗನು, ಆಸ್ತಿಯನ್ನೆಲ್ಲಾ ತನಗೇ ಒಪ್ಪಿಸಬೇಕೆಂದು ಕೇಳಿದನು.

ಗುಲಾಮನು ಹಾಗೆ ಮಾಡಲು ನಿರಾಕರಿಸುತ್ತ, ವೀಲುನಾಮೆಯನ್ನು ಆ ಹುಡುಗನಿಗೆ ತೋರಿಸಿ, "ನೋಡು, ಇದು ನಿನ್ನ ತಂದೆ ಸಾಯುವ ಮೊದಲು ಬರೆದಿಟ್ಟ ವೀಲುನಾಮೆ. ಇದರ ಪ್ರಕಾರ ನಿನ್ನ ತಂದೆಯ ಆಸ್ತಿ ಪೂರಾ ನನ್ನ ಸ್ವಾಧೀನವೇ ಆಗುತ್ತದೆ. ಬೇಕಾದರೆ ನೀನು ಆ ಆಸ್ತಿಯಲ್ಲಿ ಯಾವುದೋ ಒಂದನ್ನು ಮಾತ್ರ ಕೇಳಿ ತೆಗೆದುಕೊಳ್ಳಬಹುದು ಅಷ್ಟೇ" ಎಂದನು.

ವರ್ತಕನ ಮಗನು ಆ ವೀಲುನಾಮೆಯನ್ನು ನೋಡಿ ದಿಗ್ಭ್ರಮೆಗೊಂಡನು. ಅವನಿಗೆ ಏನು ಮಾಡಬೇಕೆಂದು ಗೊತ್ತಾಗದೆ, ತನ್ನ ತಂದೆಯ ಮಿತ್ರನಾದ ಒಬ್ಬ ವೃದ್ಧನ ಬಳಿಗೆ ಹೋಗಿ ಸಂಗತಿಯನ್ನೆಲ್ಲಾ ಹೇಳಿ ಅವನ ಸಲಹೆ ಕೇಳಿದನು.

ಆ ವೃದ್ಧನು ದೊಡ್ಡ ಮೇಧಾವಿಯಾಗಿದ್ದನು. ಲೋಕ ವ್ಯವಹಾರ ತಿಳಿದವನು. ಅವನು ಹುಡುಗನ ಬೆನ್ನು ತಟ್ಟಿ, "ಅಪ್ಪಾ, ನೀನು ಏನೂ ಚಿಂತಿಸಬೇಕಾಗಿಲ್ಲ. ಇದರಿಂದ ನಿನಗೆ ಬಂದ ನಷ್ಟವೇನೂ ಇಲ್ಲ. ಹೀಗೆ ವೀಲುನಾಮೆ ಬರೆದು ನಿನಗೆ ಉಪಕಾರವನ್ನೇ ಮಾಡಿದ್ದಾರೆ. ನಾಳೆ ನ್ಯಾಯಾಸ್ಥಾನಕ್ಕೆ ಬಾ. ಆ ವೀಲುನಾಮೆಯನ್ನು ತೆಗೆದುಕೊಂಡು ಆ ಗುಲಾಮನೂ ನ್ಯಾಯಸ್ಥಾನಕ್ಕೆ ಬರಬೇಕೆಂದು ಹೇಳು. ಅಲ್ಲಿ ನೀನು ನನ್ನ ಸಲಹೆಯಂತೆ ನಡೆದರೆ ಎಲ್ಲವೂ ಸರಿಹೋಗುತ್ತದೆ" ಎಂದನು.

ಮರುದಿನ ಬೆಳಿಗ್ಗೆ ವರ್ತಕನ ಮಗನೂ, ವರ್ತಕನ ವೀಲುನಾಮೆಯೊಂದಿಗೆ ಗುಲಾಮನೂ ನ್ಯಾಯಾಸ್ಥಾನದಲ್ಲಿ ಹಾಜರಾದರು. ನ್ಯಾಯಾಧಿಕಾರಿಯ ಇದಿರಿನಲ್ಲಿ ವೀಲುನಾಮೆ ಓದಿದರು.

"ಈಗ ನಿನ್ನ ತಂದೆಯ ಆಸ್ತಿಯಲ್ಲಿ ನೀನು ಯಾವುದನ್ನು ಕೇಳುತ್ತೀ?" ಎಂದು ನ್ಯಾಯಾಧಿಕಾರಿ ವರ್ತಕನ ಮಗನನ್ನು ಕೇಳಿದನು.

ಆ ಪ್ರಶ್ನೆಗೆ ಏನು ಉತ್ತರ ಕೊಡಬೇಕೆಂದು ಮೇಧಾವಿ ವೃದ್ಧನು ಮೊದಲೇ ವರ್ತಕನ ಮಗನಿಗೆ ಹೇಳಿಟ್ಟಿದ್ದರಿಂದ, ಆ ಹುಡುಗನು ತಂದೆಯ ಗುಲಾಮನನ್ನು ನೋಡಿ, "ನಾನು ಈ ಗುಲಾಮನನ್ನು ಬೇಕೆಂದು ಕೇಳುತ್ತೇನೆ" ಎಂದನು.

ನ್ಯಾಯಾಧಿಕಾರಿ ಆ ಗುಲಾಮನನ್ನು ವರ್ತಕನ ಮಗನಿಗೆ ಗುಲಾಮನಾಗಬೇಕೆಂದು ಹೇಳಿ, ತೀರ್ಪಿತ್ತನು. ಹಾಗೆ ವರ್ತಕನು ಆ ಗುಲಾಮನೊಂದಿಗೆ ಬಿಟ್ಟುಹೋದ ದೂರ ದೇಶಗಳ ಧನವೂ, ಊರಿನ ಸೊತ್ತು, ಸರ್ವಸ್ವವೂ ವರ್ತಕನ ಮಗನಿಗೇ ಸೇರಿತು.





# ಬುರುಡೆ ದಾಸರು

ಒಂದಾನೊಂದು ಗ್ರಾಮದಲ್ಲಿ ನಾಲ್ಕು ಮಂದಿ ಹುಡುಗರಿದ್ದರು. ಅವರು ನಾಲ್ವರೂ ಒಟ್ಟೊಟ್ಟಿಗೇ ಇರುತ್ತ ತಮ್ಮೊಳಗೆ ಏನೇನೋ ಕಲ್ಪಿಸಿಕೊಂಡು ಹೇಳಿಕೊಳ್ಳುತ್ತ, ಹೊತ್ತು ಕಳೆಯುತ್ತಿದ್ದರು.

ಒಂದು ದಿನ ಗ್ರಾಮದ ಕೊನೆಯಲ್ಲಿರುವ ಒಂದು ಛತ್ರಕ್ಕೆ ಯಾವುದೋ ಹೊರಗಿನ ಊರಿನವನೊಬ್ಬನು ಬಂದುದನ್ನು ಆ ಬುರಡೆದಾಸರು ನೋಡಿದರು. ಹಾಗೆ ಬಂದವನು ಒಳ್ಳೆಯ ಬಟ್ಟೆಗಳನ್ನು ಧರಿಸಿಕೊಂಡಿದ್ದನು. ಅವನ ಆ ಬಟ್ಟೆಗಳನ್ನು ಅಪಹರಿಸಬೇಕೆಂದು ನಾಲ್ವರು ಬುರುಡೆದಾಸರಿಗೂ ತೋರಿತು. ಅವರು ಆ ಮನುಷ್ಯನನ್ನು ಮಾತಾಡಿಸಿ, ಅದೂ ಇದೂ ಹೇಳಲು ಪ್ರಾರಂಭಿಸಿದರು.

ಕಡೆಗೆ ಬುರುಡೆದಾಸರಲ್ಲಿ ಒಬ್ಬ ಹುಡುಗ, "ನಾವೀಗ ಒಂದು ಸಣ್ಣ ಪಂದ್ಯ ಹಾಕೋಣ. ಒಬ್ಬೊಬ್ಬನೂ ತನಗೆ ಬಂದ ವಿಚಿತ್ರ ಅನುಭವವನ್ನು ಹೇಳಬೇಕು. ಕೇಳುವವರಲ್ಲಿ ಯಾವನಾದರೂ ಆ ಅನುಭವವನ್ನು ನಂಬದಿದ್ದರೆ, ನಂಬದವನು ಕಥೆ ಹೇಳಿದವನಿಗೆ ದಾಸನಾಗಿ ತನ್ನ ಅಂಗಿ ಬಟ್ಟೆಗಳನ್ನು ಕೊಟ್ಟುಬಿಡಬೇಕು" ಎಂದನು. ಇದಕ್ಕೆ ಹೊರಗಿನ ಊರಿನ ಮನುಷ್ಯ ಸರಿಯೆಂದು ಒಪ್ಪಿದನು. ಅವನ ಒಪ್ಪಿಗೆಯನ್ನು ಕೇಳಿ ವಾನರ ಮತಿಗಳಿಗೆ ಬಹಳ ಸಂತೋಷವಾಯಿತು. ಏಕೆಂದರೆ ಅವರು ಹೇಳುವುದನ್ನು ಯಾರಿಗೂ ನಂಬಲಾಗದು.

ಮೊದಲನೆಯವನು ಹೀಗೆಂದು ಕಥೆ ಹೇಳಿದನು :

"ನನ್ನ ಅಮ್ಮ ನಾನು ಹೊಟ್ಟೆಯಲ್ಲಿರುವಾಗಲೇ ನಮ್ಮ ಮನೆಯ ಎದುರಿನಲ್ಲಿದ್ದ ನೇರಳೇ ಮರದ ಹಣ್ಣು ತಿನ್ನಬೇಕೆಂದು ಅಪ್ಪನ ಹತ್ತಿರ ಹೇಳಿದಳು. ಅಷ್ಟು ಎತ್ತರದ ಮರಕ್ಕೆ ಹತ್ತಲು ತನ್ನಿಂದಾಗದೆಂದು ಅಪ್ಪ ಹೇಳಿಬಿಟ್ಟರು. ನನ್ನ ಅಣ್ಣಂದಿರನ್ನೂ ಕೇಳಿದರೆ ಅವರೂ ಸಾಧ್ಯವಿಲ್ಲ ಎಂದರು. ನನಗೆ ನನ್ನ ಅಮ್ಮನ ಮೇಲೆ ಕನಿಕರ ಬಂದು, ಅಮ್ಮನ ಹೊಟ್ಟೆಯೊಳಗಿನಿಂದ ಅವಳಿಗೆ ತಿಳಿಯದಂತೆ ಹೊರಗೆ ಬಂದು, ನೇರಳೇ ಮರವನ್ನು ಸರಸರನೆ ಏರಿ, ಹಣ್ಣುಗಳನ್ನೆಲ್ಲ ಕೊಯಿದು ತಂದು ಅಡಿಗೇ ಮನೆಯ ಮೂಲೆಯಲ್ಲಿ ಅಡಗಿಸಿಟ್ಟೆನು. ಆಮೇಲೆ ಏನೂ ತಿಳಿಯದವನ ಹಾಗೆ ಅಮ್ಮನ ಹೊಟ್ಟೆಯೊಳಗೆ ತೂರಿ ಸುಮ್ಮನಿದ್ದೆ. ಅಮ್ಮ ನೇರಳೆ ಹಣ್ಣಿನ ಪರಿಮಳ ಹಿಡಿದು ಅಡಿಗೆ ಮನೆಯ ಮೂಲೆ

ದಶಕಗಳಾಚೆಗಿನ ಚಂದಮಾಮ ಕಥೆ

ಯಲ್ಲಿದ್ದ ಹಣ್ಣುಗಳನ್ನು ನೋಡಿ, ಸಂತೋಷದಿಂದ ತಿಂದಳು. ಉಳಿದುವನ್ನು ಊರೊಳಗಿನ ಎಲ್ಲರಿಗೂ ಹಂಚಿದಳು. ಇನ್ನೂ ಉಳಿದ ಹಣ್ಣುಗಳನ್ನು ಮನೆಯ ಮುಂದೆ ಬಿಸುಟಳು. ಹಾಗೆ ಬಿಸುಟ ರಾಶಿಯಿಂದ ನಮ್ಮ ಮನೆಯೇ ಕಾಣದೆ ಹೋಯಿತು."

ಹೀಗೆ ಕಥೆಯನ್ನು ಮುಗಿಸಿ ಮೊದಲನೆಯವನು ಹೊರಗಿನ ಊರಿನವನ ಮುಖವನ್ನು ನೋಡಿದನು. "ಇದು ನಂಬುವ ಹಾಗೆಯೇ ಇದೆ" ಎಂದನು ಆ ಮನುಷ್ಯ. ಉಳಿದವರೂ ನಂಬಿಗೆ ತೋರಿಸಿದರು.

ಆಗ ಎರಡನೇ ಬುರುಡೆದಾಸ ಹೀಗೆ ಹೇಳ ತೊಡಗಿದನು :

"ನಾನು ಹುಟ್ಟಿ ಎಂಟು ದಿನಗಳಾಗಿದ್ದುವಷ್ಟೇ, ಆಗಲೇ ನಾನು ಬೇಟೆಯಾಡಲು ಕಾಡಿಗೆ ಹೋದೆನು. ಅಲ್ಲಿ ಒಂದು ಹುಣಿಸೇಮರ ಕಾಣಿಸಿತು. ಮರದ ತುಂಬಾ ಹುಣಿಸೇ ಹಣ್ಣಿನ ಕೋಡುಗಳು ನೇತಾಡು ತ್ತಿದ್ದುವು. ನನಗೆ ವಿಪರೀತ ಹಸಿವೆಯಾಗಿದ್ದುದರಿಂದ ಕೂಡಲೇ ಮರದ ಮೇಲೆ ಹತ್ತಿ ಹೊಟ್ಟೆ ತುಂಬಾ ಹುಣಿಸೇ ಹಣ್ಣು ತಿಂದೆನು. ಅದರಿಂದ ಹೊಟ್ಟೆ ಭಾರವಾಗಿ, ತೂಕಡಿಕೆ ಬಂತು. ಕೆಳಗಿಳಿಯಲು ಸಾಧ್ಯ ವಾಗಲಿಲ್ಲ. ಆಗ ನಾನು ಮರದಿಂದ ಕೆಳಗೆ ಹಾರಿ ಊರೊಳಗೆ ಓಡಿ ಯಾರದೋ ಒಂದು ಏಣಿ ಯನ್ನು ತಂದು ಆ ಮರಕ್ಕೆ ಇಟ್ಟು, ಅದರಲ್ಲಿ ಸುಲಭವಾಗಿ ಕೆಳಗಿಳಿದು ಬಂದೆ. ಒಳ್ಳೇ ವೇಳೆ, ನನಗೊಂದು ಏಣಿ ಸಿಕ್ಕದಿರುತ್ತಿದ್ದರೆ ಇನ್ನೂ ಆ ಮರದ ಮೇಲೆಯೇ ಇರುತ್ತಿದ್ದೆ."

ಇದನ್ನು ಕೇಳಿ "ನಿಜ ನಿಜ, ನಂಬುತ್ತೇನೆ" ಎಂದು ಹೊರಗಿನ ಊರಿನವನು ತಲೆಯಾಡಿಸಿದನು. ಉಳಿದವರೂ ನಂಬುವೆವೆಂದರು.

ಆಗ ಮೂರನೇ ಬುರುಡೆದಾಸ ಈ ಕೆಳಗಿನಂತೆ ಹೇಳಲು ತೊಡಗಿದನು :

"ನಾನು ಆಟದ ಹುಡುಗನಾಗಿದ್ದ ಒಂದು ಕಾಲ ದಲ್ಲಿ ಒಂದು ಮೊಲವನ್ನು ನೋಡಿ ಅದನ್ನು ಹಿಡಿಯಲು ಓಡಿದೆನು. ಅದು ಓಡಿಯೋಡಿ ಒಂದು ಪೊದರಿನೊಳಗೆ ತೂರಿತು. ನಾನು ಬಿಡದೆ ಪೊದರಿ



ನೊಳಗೆ ತೂರಿ ನೋಡಿದರೆ, ಅಲ್ಲೊಂದು ದೊಡ್ಡ ಹುಲಿ! ಅದು ನನ್ನನ್ನು ನುಂಗಬೇಕೆಂದು ಬಾಯಿ ತೆರೆಯಿತು. ನನ್ನನ್ನು ನುಂಗುವುದು ತಪ್ಪೆಂದೂ, ನಾನು ಮೊಲವೆಂದುಕೊಂಡು ಹೀಗೆ ಓಡಿಬಂದೆನೆಂದೂ ಹೇಳಿ ನೋಡಿದೆ. ಅದು ನನ್ನ ಮಾತು ಕೇಳದೆ ಬಾಯಿ ತೆರೆದುಕೊಂಡು ನನ್ನ ಮೇಲೆ ಹಾರಿತು. ನನಗೆ ಬಹಳ ಸಿಟ್ಟು ಬಂದು ಎಡದ ಕೈಯನ್ನೆತ್ತಿ ಅದರ ಮೇಲು ದವಡೆಯನ್ನು ಮೇಲಕ್ಕೆ ದೂಡಿದೆನು. ಅದರಿಂದ ಹುಲಿಯ ಬಾಯಿ ಎರಡಾಗಿ ಸೀಳಿ, ಅದು ಸತ್ತುಬಿತ್ತು."

ಈ ಕಥೆಯನ್ನು ಕೂಡಾ ನಂಬಿದಂತೆ ಹೊರಗಿನ ಊರಿನವನು ತಲೆಯಾಡಿಸಿದನು. ಉಳಿದ ಮೂವರೂ ನಂಬುತ್ತೇವೆಂದು ತಲೆಯಾಡಿಸಿದರು.

ಆಗ ನಾಲ್ಕನೇ ಬುರುಡೆದಾಸ ಹೇಳತೊಡಗಿದನು: "ನಾನು ಕಳೆದ ವರ್ಷ ಮೀನುಗಳ ಬೇಟೆಗೆ ಹೋದೆನು. ಒಂದೇ ಒಂದು ಮೀನೂ ನನಗೆ ಸಿಗಲಿಲ್ಲ. ಇದೇನೆಂದು ಉಳಿದ ಹಳ್ಳಿಯ ಜನರನ್ನು ಕೇಳಿದ್ದಕ್ಕೆ ತಮಗೂ ಒಂದು ಮೀನು ಸಹಾ ಸಿಕ್ಕಲಿಲ್ಲವೆಂದು ಹೇಳಿದರು. ನದಿಯ ಅಡಿಯಲ್ಲೇ ಏನೋ ವಿಶೇಷ ನಡೆದಿರಬೇಕೆಂದು ತೋರಿತು. ಅದನ್ನು ಕೂಡಾ ಪರೀಕ್ಷಿಸಿಬಿಡೋಣವೆಂದು ನಾನು ನನ್ನ ದೋಣಿಯಿಂದ ನೀರಿಗೆ ಹಾರಿ ಮುಳುಗಿದೆ. ನದಿಯ ಅಡಿಯಲ್ಲಿ ಗುಡ್ಡದಷ್ಟು ದೊಡ್ಡ ಒಂದು ಮೀನು ಇತ್ತು. ಅದೇ ಎಲ್ಲಾ ಮೀನುಗಳನ್ನೂ ತಿಂದುಬಿಟ್ಟಿದೆಯೆಂದು ನನಗೆ ಗೊತ್ತಾಯಿತು. ಒಂದೇ ಒಂದು ಗುದ್ದಿನಿಂದ ಆ ದೊಡ್ಡ ಮೀನನ್ನು ಜಜ್ಜಿ ಕೊಂದುಬಿಟ್ಟೆ. ಅಷ್ಟು ಹೊತ್ತಿಗೆ ನನಗೆ ವಿಪರೀತ ಹಸಿವೆಯಾಗತೊಡಗಿತು. ಅಲ್ಲಿಯೇ ಬೆಂಕಿ ಹಚ್ಚಿ ಕೊಂದ ಮೀನನ್ನು ಅದರಲ್ಲಿ ಸುಟ್ಟು ಪೂರ್ತಿ ತಿಂದುಬಿಟ್ಟೆ. ಆಮೇಲೆ ನೀರಿನಿಂದ ಮೇಲೆ ಬಂದು ನನ್ನ ದೋಣಿಯನ್ನೇರಿ ಮನೆಗೆ ಬಂದೆ."

ಈ ಕಥೆಯನ್ನು ಕೂಡಾ ನಂಬುವುದಾಗಿ ಹೊರಗಿನ ಊರಿನವನು ತಲೆಯಾಡಿಸಿದನು. ಉಳಿದ ಮೂವರೂ ವಿಧಿಯಿಲ್ಲದೆ ನಂಬುತ್ತೇವೆಂದರು.



ಈಗ ಹೊರಗಿನ ಊರನವನು ಹೇಳಬೇಕಾದ ಸರದಿ ಬಂತು. ಅವನು ಹೇಳಲು ತೊಡಗಿದನು :

"ಹಿಂದೆ ನನಗೆ ಒಂದು ಹತ್ತಿಯ ತೋಟವಿದ್ದಿತು. ಅದರಲ್ಲಿ ಒಂದು ಹತ್ತಿಯ ಮರ ಬಹಳ ದೊಡ್ಡದಾಗಿತ್ತು. ಅದು ಕೇಪಗೆ ಉದ್ದಕ್ಕೆ ಬೆಳೆದ ಮರ. ಬುಡದಲ್ಲಿ ಯಾವ ಕೊಂಬೆಯೂ ಎಲೆಗಳೂ ಇದ್ದಿಲ್ಲ. ಮೇಲ್ಭಾಗದಲ್ಲಿ ನಾಲ್ಕು ದೊಡ್ಡ ದೊಡ್ಡ ಕೊಂಬೆಗಳಿದ್ದುವು. ಅದರ ಒಂದೊಂದು ಕೊಂಬೆಯಲ್ಲಿ ಇಷ್ಟಿಷ್ಟು ಉದ್ದಕ್ಕೆ ಒಂದೊಂದೇ ಕಾಯಿ ಬಿಟ್ಟಿತು. ಬೆಳೆದ ನಾಲ್ಕು ಹತ್ತೀಕಾಯಿಗಳನ್ನು ಒಡೆದು ಬಿಡಿಸಿದಾಗ ಅದರೊಳಗಿನಿಂದ ನಾಲ್ಕು ಮಂದಿ ಹುಡುಗರು ಹೊರಗೆ ಬಂದರು. ಅವರು ನನ್ನ ಹೊಲದಲ್ಲಿ ಬೆಳೆದ ಹತ್ತೀ ಮರದ ಕಾಯಿಗಳಿಂದ ಬಂದವರಾದುದರಿಂದ ಅವರು ನನ್ನ ದಾಸರೇ ಆದರಷ್ಟೆ ? ಅವರಿಂದ ತೋಟದಲ್ಲಿ ಕೆಲಸ ಮಾಡಿಸಿಕೊಂಡಿದ್ದೆನು. ಬರುಬರುತ್ತಾ ಅವರು ನಾಲ್ವರೂ ಸೋಮಾರಿಗಳಾಗಿ ಕೆಲಸಕ್ಕೆ ತಪ್ಪಿಸಿಕೊಳ್ಳುತ್ತಿದ್ದರು. ಊಟದ ಹೊತ್ತಿಗೆ ತಯಾರಾಗಿ ಬರುತ್ತಿದ್ದರು. ನಾನು ಅವರನ್ನು ಬಿಡದೆ ಬೈದು ಬೈದು ಕೆಲಸ ಮಾಡಿಸಿಕೊಳ್ಳುತ್ತಾ ಇದ್ದೆ. ಒಂದು ದಿನ ಆ ನಾಲ್ವರೂ ಹೇಳದೆ ಕೇಳದೆ ಓಡಿಹೋಗಿಬಿಟ್ಟರು. ಅವರನ್ನು ಹುಡುಕುತ್ತಾ ಬಂದ ನಾನು ಇದೀಗ ಇಲ್ಲಿ ಅವರನ್ನು ಕಂಡುಹಿಡಿದುಬಿಟ್ಟೆನು. ಗುರುತು ತಿಳಿಯದವರ ಹಾಗೆ ನಟನೆ ಮಾಡಿದರೂ ನನಗೆ ಗುರುತು ಹತ್ತಿತು. ಆ ನಾಲ್ವರು ಹುಡುಗರೂ ನೀವೇ. ಒಳ್ಳೆಯ ಮಾತಿನಲ್ಲಿ ನನ್ನೊಂದಿಗೆ ನನ್ನ ತೋಟದ ಕೆಲಸಕ್ಕೆ ಬಂದುಬಿಡಿ. ಹೂಂ."

ಈ ಮಾತು ಕೇಳಿ ನಾಲ್ವರು ಬುರುಡೆದಾಸರೂ ತಲೆ ತಗ್ಗಿಸಿಕೊಂಡರು. ಈಗ ಅವರು ದೊಡ್ಡ ತೊಡಕಿನಲ್ಲಿ ಸಿಕ್ಕಿದ್ದರು. ಇದು ನಿಜವೆಂದು ಒಪ್ಪಿಕೊಂಡರೆ ತಾವು ನಾಲ್ವರೂ ಆ ಹೊರಗಿನ ಊರಿನವನಿಗೆ ದಾಸರಾಗಿಬಿಡಬೇಕಿತ್ತು. ನಂಬುವುದಿಲ್ಲವೆಂದರೂ ದಾಸರೇ ಆಗಬೇಕು.

ಇಷ್ಟು ಹೊತ್ತು ಸುಮ್ಮನಿದ್ದ ಛತ್ರದಲ್ಲಿದ್ದ ಇತರರು ಬರುಡೆದಾಸರನ್ನು ನೋಡಿ, "ಅವರು ಹೇಳಿದ್ದು ನಂಬುವಿರೋ ಇಲ್ಲವೋ ಹೇಳದಿರುವಿರೇಕೆ ? ಮೂಕರಾದಿರೇಕೆ ?" ಎಂದು ಕೇಳಿದರು.

ಅದಕ್ಕೂ ಅವರೇನೂ ಹೇಳದೆ ಬಾಡಿದ ದೃಷ್ಟಿಯಿಂದ ನೆಲ ನೋಡುತ್ತಿದ್ದರು.

"ಸರಿ ಬಿಡಿ. ನಿಮ್ಮ ಬಟ್ಟೆಗಳನ್ನೆಲ್ಲ ಕೊಟ್ಟು ಬಿಡಿರಿ. ನಿಮಗೆ ಸ್ವೇಚ್ಛೆ ಕೊಡುತ್ತೇನೆ" ಎಂದು ಹೇಳಿ ಹೊರಗಿನ ಊರಿನವನು ವಾನರ ಮತಿಗಳ ಅಂಗಿ ಬಟ್ಟೆಗಳನ್ನು ತೆಗೆದುಕೊಂಡು, ಭಿಕ್ಷುಕರಿಗೆ ಕೊಟ್ಟು ತನ್ನ ದಾರಿ ಹಿಡಿದು ಹೊರಟುಹೋದನು.



# ಪ್ರಕೃತಿ ವಿಚಿತ್ರಗಳು:



## ಪಸೆಯಿಲ್ಲದ ಪ್ರಾಂತ್ಯ

ಚಿಲೀ ದೇಶದೊಳಗಿನ ಆಟಕಾಮಾ ಮರುಭೂಮಿಯು ಪ್ರದೇಶವು. ಪ್ರಪಂಚದೊಳಗೆಲ್ಲಾ ಸ್ವಲ್ಪವೂ ಪಸೆಯಿಲ್ಲದ ಒಣ ಪ್ರಾಂತ್ಯವಾಗಿ ಭಾವಿಸಲ್ಪಡುತ್ತದೆ. ಸುಮಾರು ೪೦೦ ಸಂವತ್ಸರಗಳಿಂದ ಅಲ್ಲಿ ಹೇಳಿಕೊಳ್ಳುವಷ್ಟು ಮಳೆ ಬಂದುದಿಲ್ಲ.

## ಭೂಮಿಯ ಅಡಿಯಲ್ಲಿ ಹೂಬಿಡುವ ಗಿಡ



ಆಸ್ಟ್ರೇಲಿಯಾದಲ್ಲಿ ಕಾಣುವ ರಿಜಾನ್‌ಥೇಲಿಯಾ ಗಾರ್ಡ್ನೆರಿ ಎಂಬ ಹೂವಿನ ಗಿಡವು ಭೂಮಿಯ ಒಳಗೇ ಹೂಬಿಡುತ್ತದೆ !




## ಮಹಾವೃಕ್ಷ!

ಪ್ರಪಂಚದೊಳಗೆಲ್ಲಾ ದೊಡ್ಡ ವೃಕ್ಷವು ಕಾಲಿಫೋರ್ನಿಯಾದಲ್ಲಿದೆ. ಎಲ್ಲರಿಂದಲೂ ಜನರಲ್ ಷರ್ಮನ್ ಎಂದು ಮುದ್ದಾಗಿ ಕರೆಯಲ್ಪಡುವ ಈ ವೃಕ್ಷವು ೨೭೨ ಅಡಿ ಎತ್ತರವೂ, ೭೯.೧ ಅಡಿ ಸುತ್ತಳತೆಯೂ ೨೦೩೦ ಟನ್ನು ಭಾರವೂ ಇರುವಂತಹುದು !

## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೭ ಜನವರಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



M. Natarajan



P. Balasubramanian

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ನವಂಬರ್ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು–೬೦೦ ೦೨೬

---

### ಸೆಪ್ಟೆಂಬರ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಚಿಕ್ಕವಳ ಸಂತೋಷಕ್ಕೆ ಇಷ್ಟಿದ್ದರೇ ಸಾಕು,

ಎರಡನೇ ಫೋಟೋ : ದೊಡ್ಡವರ ಸಂತೋಷಕ್ಕೆ ಇಷ್ಟೆಲ್ಲಾ ಇರಬೇಕು

ಕಳುಹಿಸಿದವರು : ಶ್ರೀಮತಿ ಭಾಗ್ಯಶ್ರೀ ಹೆಚ್. ಪಾಟೀಲ, ಕಳಸೂರು, ಧಾರವಾಡ

ಬಹುಮಾನ ರೂ. ೫೦/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು


## ಚಂದಮಾಮ

ಇಂಡಿಯಾದಲ್ಲಿ ವಾರ್ಷಿಕ ಚಂದಾ : ರೂ. ೩೦–೦೦

ಡಾಲ್ಟನ್ ಏಜನ್ಸೀಸ್, ಚಂದಮಾಮ ಬಿಲ್ಡಿಂಗ್ಸ್, ವಡಪಳನಿ, ಮದರಾಸು–೬೦೦ ೦೨೬

ಬೇರೆ ದೇಶಗಳ ಚಂದಾ ವಿವರಗಳಿಗೆ ಬರೆಯಿರಿ :

ಚಂದಮಾಮ ಪಬ್ಲಿಕೇಷನ್ಸ್, ಚಂದಮಾಮ ಬಿಲ್ಡಿಂಗ್ಸ್, ವಡಪಳನಿ, ಮದ್ರಾಸು–೬೦೦ ೦೨೬

Printed by B.V. REDDI at Prasad Process Private Ltd., 188 N.S.K. Salai, Madras 600 026 (India) and Published by B. VISWANATHA REDDI on behalf of CHANDAMAMA PUBLICATIONS, Chandamama Buildings, Vadapalani, Madras 600 026 (India). Controlling Editor: NAGI REDDI.